

# VISA AS EASY TO USE ABROAD AS AT HOME

Beyond the hotel, the floodlit tennis courts, past the superb 9-hole golf course designed by Gary Player, lies the sea, and the beauties of the coral reef waiting to be discovered. Le Saint Geran is all about superlatives, a palace in paradise.

## ROMANCE IS LE TOUESSROK

Le Touessrok is a place where the memories of a lifetime are created, especially for those in love. It is, in fact, probably the world's most



## VITALITY IS LA PIROGUE

Between the mountains and the sea on the western coast of Mauritius, shaped like the local Mauritian fishing boats from which it takes its name, lies La Pirogue, an exciting hotel for all the family.



Clustered beneath the palms throughout 80 acres of tropical gardens that border the long beach of white sand, the luxurious cane-thatched cottages are always there as havens in which to relax and recuperate. The glittering waters of the lagoon hide the wonders of the coral world which even inexperienced divers can discover with instruction from experts at our superbly equipped diving centre. Those who prefer to remain on the surface can



Career Planning

Job search tips & methods

Aptitude test

***Feedback & analysis sessions after every program***

***20 hours of contact classes in each semester (spread over the entire semester)***

***Plenty of correspondence assignments for practice (for 2 weeks after the program)***

**SEMESTER WISE IMPLIMENTATION** (for MBA, MMB students)

ಓಂ ತತ್‌ಸದ್‌ಬ್ರಹ್ಮಣೇ ಪರಮಾತ್ಮನೇ ನಮಃ

ಶ್ರೀಮದ್ಭಾಗವತಮಹಾಪುರಾಣ ದಶಮಸ್ಕಂಧ ೮೭ನೇ ಅಧ್ಯಾಯ. ಅಲ್ಲಿ ಪರೀಕ್ಷಿದ್ರಾಜನು ಶುಕಮುನಿಗಳನ್ನು ಕುರಿತು ಪ್ರಶ್ನೆ ಮಾಡುವನು :-

ಬ್ರಹ್ಮನ್ ಬ್ರಹ್ಮಣ್ಯನಿರ್ದೇಶ್ಯೇ ನಿರ್ಗುಣೇ ಗುಣವೃತ್ತಯಃ ।
ಕಥಂ ಚರನ್ತಿ ಶ್ರುತಯಃ ಸಾಕ್ಷಾತ್‌ಸದಸತಃ ಪರೇ ॥

ವೇದಗಳು ವಾಗ್‌ರೂಪವಾಗಿರುತ್ತವೆ. ವಾಕ್ ಎಂದರೆ ಮಾತು. ಮಾತು ಜಾತಿ, ಗುಣ, ಕ್ರಿಯಾ ವಿಶಿಷ್ಟವಾದ ಅರ್ಥವನ್ನು ತಿಳಿಸಿಕೊಡುವಂತಹದಾಗಿರುತ್ತದೆ. ಪರಮಾರ್ಥ ಬ್ರಹ್ಮವಸ್ತುವಾದರೋ ಅನಿರ್ದೇಶ್ಯವು. ಅಂದರೆ ಜಾತಿ ಗುಣ ಕ್ರಿಯೆ ಎಂಬ ಯಾವ ವಿಶೇಷವೂ ಇಲ್ಲದುದಾಗಿರುವುದು. ಅಂದಾಗ ಇಂತಹ ಅಪ್ರಮೇಯವಾದ ಸತ್ ಎಂದಾಗಲೀ ಅಸತ್ ಎಂದಾಗಲೀ (ಅಂದರೆ ಸತ್ = ಹಸು, ಕುದುರೆ ಇತ್ಯಾದಿ ಸದ್ವಸ್ತುಗಳು. ಅಸತ್ = ಮೊಲದಕೊಂಬು, ಆಕಾಶಕುಸುಮ ಇತ್ಯಾದಿ) ಹೇಳಲಾಗದ ಬ್ರಹ್ಮವನ್ನು ವಾಣೀ ರೂಪವಾದ ವೇದವು ಹೇಗೆ ತಿಳಿಸುವುದು? ಬ್ರಹ್ಮವು ಪದಾರ್ಥವೂ ಅಲ್ಲ, ವಾಕ್ಯಾರ್ಥವೂ ಆಗಿರುವುದಿಲ್ಲೆಂದು ಹೇಳುತ್ತಿರುವಿರಿ. ಇಂತಹ ಶುದ್ಧಬ್ರಹ್ಮ ಪರಮಾತ್ಮನಲ್ಲೇ ವೇದತಾತ್ಪರ್ಯವೆನ್ನುವುದು ಎಂತಾಗುವುದು ? ಎಂಬೀ ಪ್ರಶ್ನೆಗೆ ಶುಕಮುನಿಗಳು ಉತ್ತರಿಸುತ್ತಾರೆ:-

ಸ್ವಸೃಷ್ಟಮಿದಮಾಪೀಯ ಶಯಾನಂ ಸಹ ಶಕ್ತಿಭಿಃ ।
ತದಂತೇ ಬೋಧಯಾಂಚಕ್ರುಸ್ತಲ್ಲಿಂಗೈಃ ಶ್ರುತಯಃ ಪರಂ ॥
ಯಥಾ ಶಯಾನಂ ಸಮ್ರಾಜಂ ವಂದಿನಸ್ತತ್ಪರಾಕ್ರಮೈಃ ।
ಪ್ರತ್ಯೂಷೇಽಭ್ಯೇತ್ಯ ಸುಶ್ಲೋಕೈ ರ್ಬೋಧಯಂತ್ಯನುಜೀವಿನಃ ॥

ಮಹಾರಾಜ ಸಾರ್ವಭೌಮನು ರಾತ್ರಿವೇಳೆ ನಿದ್ರಿಸುತ್ತಿರಲು ಬೆಳಗಿನ ಜಾವದಲ್ಲಿ ಅವನನ್ನು ಎಚ್ಚರಪಡಿಸುವುದಕ್ಕಾಗಿ ವಂದಿಮಾಗಧರು ಆ ರಾಜನ ಸ್ವಾಭಾವಿಕವೂ ಅಸಾಧಾರಣವೂ ಆದ ಪ್ರಜ್ಞಾಪರಾಕ್ರಮಗಳನ್ನೂ, ಗುಣ ಕೀರ್ತಿ ವಿಶೇಷಗಳನ್ನೂ ಹಾಡಿ ಹೊಗಳುವರಷ್ಟೇ! ಹಾಗೆಯೇ ಜಗತ್ಪ್ರಲಯಕಾಲದಲ್ಲಿ ಪರಮಾತ್ಮನು ತಾನು ಸೃಷ್ಟಿಮಾಡಿದ

ಸಕಲ ಜಗತ್ತನ್ನೂ ತನ್ನ ಸರ್ವಶಕ್ತಿಗಳೊಡನೆ ತನ್ನಲ್ಲೇ ಅಡಗಿಸಿಕೊಂಡು ಯೋಗನಿದ್ರಾಮುದ್ರೆಯಲ್ಲಿರುತ್ತಿರುವಾಗ ಆ ಪ್ರಲಯಕಾಲದ ಅಂತ್ಯದಲ್ಲಿ, ಅಂದರೆ ಪುನಃ ಸೃಷ್ಟಿಸಮಯ ಪ್ರಾಪ್ತವಾದಾಗ ಹೊಗಳುಭಟರಂತಿರುವ ವೇದಗಳು ಅವನ ಗುಣಗಾನ ಮಾಡುತ್ತವೆ. ಹೇಗೆಂದರೆ, ಪರಮಾತ್ಮನಿಗೆ ಮಾತ್ರವೇ ಸಂಬಂಧಿಸಿಕೊಂಡಿರುವ ಅವನ ಮಹಾಗುಣ, ಮಹಿಮೆ, ಕೀರ್ತಿಗಳನ್ನು ಉಲ್ಲೇಖಿಸುತ್ತಾ ಸ್ತುತಿಸುತ್ತವೆ. ಹೀಗೆ ಪ್ರಶಂಸಾಗಾನದಿಂದ ಪರಮಾತ್ಮನನ್ನು ಯೋಗ ನಿದ್ರೆಯಿಂದ ಎಬ್ಬಿಸುತ್ತವೆ. ಆತ್ಮನು ಒಬ್ಬನೇ ಅದ್ವಿತೀಯನಾಗಿರುವುದರಿಂದ ಪರಮಾತ್ಮನು ಎಚ್ಚರಗೊಳ್ಳುವಂತೆ, ಆ ಸ್ತುತಿಪಾಠಗಳನ್ನು ಆಲಿಸಿ ಅರ್ಥಮಾಡಿಕೊಳ್ಳುವ ಜೀವಾತ್ಮರು ತಮ್ಮ ಅವಿದ್ಯಾಽಜ್ಞಾನಮೋಹ ನಿದ್ರೆಯನ್ನು ಕಳೆದುಕೊಂಡು ಎಚ್ಚೆತ್ತುಕೊಳ್ಳುವರು. ಏಕೆಂದರೆ ಶ್ರುತಿಗೀತೆಯು ಅದ್ವಿತೀಯಾತ್ಮನ ಯಥಾರ್ಥಗುಣಗಾನವಾಗಿರುವುದರಿಂದ ಮೋಹನಿದ್ರಾಮಗ್ನರಾದ ಜೀವಾತ್ಮರಿಗೆ ಗುರುಋಷಿ ರೂಪವಾದ ವೇದವು ಉಪದೇಶ-ಪಾಠ ಪ್ರವಚನವನ್ನೇ ಮಾಡುತ್ತದೆ. ಇದರಿಂದ ಜೀವರಿಗೆ ತಮ್ಮ ನಿಜ ಸ್ವರೂಪವು ಗೊತ್ತಾಗುತ್ತದೆ. ಹೀಗೆ ಶ್ರುತಿಗಳು ಮಾಡಿರುವ ಪರಮಾತ್ಮ ಸ್ವರೂಪ ಪ್ರತಿಪಾದನೆಯು ಸಾರ್ಥಕವಾಗಿರುತ್ತದೆ, ಸಮನ್ವಿತವಾಗಿರುತ್ತದೆ. ಅಂದರೆ ಪರಮಾತ್ಮನನ್ನು ಸ್ತುತಿಸುವ ಶ್ರುತಿಗಳು ಜೀವಾತ್ಮರನ್ನು ಎಚ್ಚರಗೊಳಿಸುತ್ತವೆ ಎಂದು ತಾತ್ಪರ್ಯ.

ಶ್ರುತಿಗೀತೆ - ಶ್ರುತಯ ಊಚುಃ - ಶ್ಲೋಕ - ೧
ಪರಮಾತ್ಮನನ್ನು ಶ್ರುತಿಗಳು ಸ್ತುತಿಸುತ್ತವೆ.

ಜಯಜಯ ಜಹ್ಯಜಾಮಜಿತ ದೋಷಗೃಭೀತಗುಣಾಂ
ತ್ವಮಸಿ ಯದಾತ್ಮನಾ ಸಮವರುದ್ಧಸಮಸ್ತಭಗಃ।
ಅಗಜಗದೋಕಸಾಮಖಿಲ ಶಕ್ತ್ಯವಬೋಧಕ ತೇ
ಕ್ವಚಿದಜಯಾಽಽತ್ಮನಾ ಚ ಚರತೋಽನುಚರೇನ್ನಿಗಮಃ ॥ ೧ ॥

ಪರಮಾತ್ಮನು ಮನೋವಾಣಿಗಳಿಗೆ ಅಗೋಚರ - ಅಪ್ರಮೇಯನಾಗಿದ್ದರೂ ಋಷಿ ಸ್ವರೂಪದ ಶ್ರುತಿಗಳು ಭಾಗತ್ಯಾಗಲಕ್ಷಣಾ ಎಂಬ ಉಪಾಯದಿಂದ ಅಥವಾ ಅನಾತ್ಮಸ್ವರೂಪವ್ಯಾವೃತ್ತಿ, ಅಂದರೆ ಅವನವಲ್ಲದ ಸ್ವರೂಪ ಧರ್ಮಗಳನ್ನು

ಅಲ್ಲಗಳೆಯುವ ಉಪಾಯದಿಂದ ಪರಮಾರ್ಥವನ್ನು ತಿಳಿಸುತ್ತವೆ. ಪರಮಾತ್ಮನನ್ನು ಸ್ತುತಿಸುವ ಕ್ರಮ ಪ್ರಕ್ರಿಯೆಯಿಂದಲೇ ಜೀವಾತ್ಮರನ್ನು ಪ್ರಬೋಧಗೊಳಿಸುತ್ತವೆ. ಅವರನ್ನು ಮೋಹನಿದ್ರೆಯಿಂದ ಎಚ್ಚರಪಡಿಸುತ್ತವೆ. ಶ್ಲೋಕಾರ್ಥ ಏನೆಂದರೆ -

ಹೇ ಅಜಿತ = ಎಂದೆಂದೂ ಅಪರಾಜಿತನಾದ ಹೇ ಮಹಾ ಪ್ರಭೋ, ಜಯಜಯ = ನಿನಗೆ ಜಯವಾಗಲಿ. ಸದಾ ನೀನು ಜಯಶಾಲಿಯಾಗಿಯೇ ಇರುವಂತಹನಾಗು. ಯಾವ ಕಾರ್ಯ ಮಾಡುತ್ತಾ ನಿನಗೆ ಜಯ ಸಿದ್ಧಿ ಆಗುವುದೆಂದರೆ - ಅಗಜಗದೋಕಸಾಂ ದೋಷಗೃಭೀತಗುಣಾಂ ಅಜಾಂ ಜಹಿ = ಚರಾಚರಾತ್ಮಕವಾದ ಈ ಪ್ರಪಂಚದ ಮನುಷ್ಯಾದಿ ಸಕಲ ಜೀವಜಂತುಗಳಿಗೆ ಸಂಸಾರ ವೈಷಮ್ಯ ಉಂಟುಮಾಡಲೆಂದು ತಾನು ಮೋಹಕವೆಂಬ ಗುಣವನ್ನು ಧರಿಸಿ, ಜೀವರ ಸ್ವರೂಪಕ್ಕೆ ಆವರಣವಾಗಿರುವ ಯಾವ ಅನಾದ್ಯ ವಿದ್ಯೆ ಮಾಯೆ ಎಂಬುದು ಇದೆಯೋ ಅದನ್ನು ನಿವಾರಿಸು. ಹೀಗೆ ಜಯಸ್ಥಾಪನೆ ಮಾಡುವವನಾಗು, ಅಂತಹ ಮಹಾ ಪ್ರಬಲವಾದ ಅಜಾ ಅವಿದ್ಯೆಯನ್ನು, ಮಾಯೆಯನ್ನು ನಿವಾರಿಸಲು ನೀನೇ ಶಕ್ತನು ಮತ್ತು ಅದರಿಂದ ನಿನಗೆ ಹಾನಿಯೇನೂ ಆಗುವುದಿಲ್ಲ. ಏಕೆಂದರೆ - ಯತ್ತ್ವಂ ಆತ್ಮನಾ ಸಮವರುದ್ಧ ಸಮಸ್ತಭಗಃ ಅಸಿ = ನೀನು ಸರ್ವಶಕ್ತನಾದ ಭಗವಂತನಾಗಿದ್ದೀಯೆ. ನಿತ್ಯಜ್ಞಾನಾನಂದೈಶ್ವರ್ಯವೀರ್ಯಕೀರ್ತಿತೇಜಸ್ ಎಂಬಿವಕ್ಕೆ ಭಗ ಎನ್ನುತ್ತಾರೆ. ಈ ಷಟ್ಕ ಸಂಪತ್ತನ್ನು ಸ್ವರೂಪದಿಂದಲೇ ಶಾಶ್ವತವಾಗಿ ಹೊಂದಿರತಕ್ಕವನು ನೀನು. ಸ್ವಸ್ವರೂಪಕ್ಕೆ ಎಂದೂ ಚ್ಯುತಿ ಉಂಟಾಗುವುದಿಲ್ಲವಷ್ಟೆ ! ಅಂತಹ ಪರಮಸಂಪತ್ತು ನಿನ್ನಲ್ಲಿ ಇರುವುದರಿಂದಲೇ ನೀನು ಜೀವ ಪುರುಷರ ಕೃಪಣತ್ವವನ್ನು ನಿವಾರಿಸಬಲ್ಲೆ ಮತ್ತು ನೀನು ನಿರ್ವಿಶೇಷ ಜ್ಞಾನಸ್ವರೂಪನೂ, ಸ್ವಯಂಪ್ರಕಾಶನೂ, ಸರ್ವಶಕ್ತನೂ, ಸರ್ವಸ್ವತಂತ್ರನೂ ಆಗಿರುವುದರಿಂದ ನಿನ್ನಿಂದಲೇ ಆ ಅವಿದ್ಯಾಮಾಯಾ ನಿವಾರಣೆಯಾಗಬೇಕು. ಆ ಜೀವ ಪುರುಷರು ತಾವೇ ಜ್ಞಾನ ಮಾಡಿಕೊಂಡು ತಮ್ಮ ಅವಿದ್ಯಾತಮಸ್ಸನ್ನು ನಿವಾರಿಸಕೊಳ್ಳಬಹುದಲ್ಲ ಎಂದರೆ, ಅದು ಶಕ್ಯವಿಲ್ಲ. ಏಕೆಂದರೆ ಅವರು ಸ್ವತಂತ್ರರಲ್ಲ. ಯಾವಾಗಲೂ ಅವಿದ್ಯಾಮಾಯಾ ಕಾಮ ಕರ್ಮಾದಿಗಳಿಗೆ ವಶರಾಗಿದ್ದು ದೀನರಾಗಿರುತ್ತಾರೆ. ಅಲ್ಲದೇ, ಅಗಜಗದೋಕಸಾಂ ಅಖಿಲಶಕ್ತ್ಯವಬೋಧಕ = ಈ ಚರಾಚರಾತ್ಮಕ ಶರೀರಿಗಳಾದ ಜೀವರ ಕರ್ಮಶಕ್ತಿ ಜ್ಞಾನಶಕ್ತಿ ಮೊದಲಾದ ಸಮಸ್ತ ವ್ಯವಹಾರಕ್ಕೂ ಮೂಲ ಚಾಲಕನಾಗಿರುವ ಚೈತನ್ಯಮಯನಾದ

— ನೀನೇ ಎಲ್ಲಾ ಶಕ್ತಿಗಳನ್ನೂ ಪ್ರಚೋದಿಸುವವನಾಗಿದ್ದೀಯೆ ಅಂದರೆ - ಜೀವರ ಅವಿದ್ಯಾತಮಸ್ಸನ್ನು ದೂರ ಮಾಡಬಲ್ಲ ಜ್ಞಾನ ಪ್ರಕಾಶವು ನಿನ್ನ ಸ್ವರೂಪ ಚೈತನ್ಯದಿಂದಲೇ ಕೈಗೂಡಬೇಕು. ಪರಮಾತ್ಮನ ಅನುಗ್ರಹದಿಂದಲೇ ಜೀವಪುರುಷರಿಗೆ ತತ್ವಜ್ಞಾನ ಸಿದ್ಧಿ ಆಗಬೇಕು. ಈ ರೀತಿ ಜೀವರ ಕರ್ಮಶಕ್ತಿ ಜ್ಞಾನಶಕ್ತಿಗಳನ್ನು ಪರಮಾತ್ಮನೇ ಉದ್ಬೋಧಿಸುವನೆಂಬುದಕ್ಕೆ ಪ್ರಮಾಣವೇನೆಂದರೆ - ನಿಗಮಃ = ವೇದವೇ ಪ್ರಮಾಣವಾಗಿದೆ. ಪರಮಾತ್ಮನು ಕೂಟಸ್ಥಸಾಕ್ಷೀ ಮಾತ್ರ ಎಂದೂ ಮನೋವಾಗಗೋಚರ, ಅಪ್ರಮೇಯ ಎಂದು ಹೇಳುತ್ತಾರಲ್ಲವೇ ! ಎಂದರೆ - ಅದಕ್ಕೆ ಹೇಳುತ್ತಾರೆ - ಕ್ವಚಿತ್ ಅಜಯಾ ಚರತಃ = ಸೃಷ್ಟಿಕಾರ್ಯ ಮತ್ತು ಅವತಾರ, ವ್ಯವಹಾರ ದಶೆಗಳಲ್ಲಿ ಪರಮಾತ್ಮನು ಮಾಯೆಯೊಂದಿಗೂ, ಜೀವಾತ್ಮನು ಅವಿದ್ಯೆ - ಅಜ್ಞಾನ ಮೋಹಗಳೊಂದಿಗೆ ಕೂಡಿಕೊಂಡಿರುವಂತೆ ತೋರುವುದರಿಂದಲೂ ಮತ್ತು ಆತ್ಮನಾ ಚ ಚರತಃ = ನಿಜದಲ್ಲಿ ಕೈವಲ್ಯ ಸ್ವರೂಪವಾದ ಶುದ್ಧ ಆತ್ಮ ಸ್ಥಿತಿಯಲ್ಲಿ ಮಾಯಾ ಅವಿದ್ಯಾ ಸಂಬಂಧವಿಲ್ಲದ ನಿರುಪಾಧಿಕನಾಗಿ ಇರುವಂತೆ ಕಂಡುಬರುತ್ತಿರುವುದರಿಂದಲೂ. ನಿಗಮಃ ತೇ ಅನುಚರೇತ್ = ನಿನ್ನ ವಿಷಯದಲ್ಲಿ ವೇದಶಾಸ್ತ್ರವು ಪ್ರವರ್ತಿಸುವುದಾಗಿರುವುದು. ನಿನ್ನನ್ನು ಪ್ರತಿಪಾದನೆ ಮಾಡುವುದು. ಸ್ತುತಿಸುವುದು. ಅಂದರೆ ಪರಮಾತ್ಮನ ನಿರ್ವಿಶೇಷ ಸ್ಥಿತಿ ಮತ್ತು ಸವಿಶೇಷ ಸ್ಥಿತಿ ಈ ಎರಡನ್ನೂ ಉಪಲಕ್ಷಿಸಿ ಶ್ರುತಿಯು ಸ್ತೋತ್ರ ಮತ್ತು ಉಪದೇಶ ಎಂಬ ದ್ವಿಮುಖವಾಗಿ ಪ್ರವರ್ತಿಸಿಕೊಂಡಿರುವುದು. ಜೀವಾತ್ಮರಿಗೆ ಆತ್ಮಸ್ವರೂಪ ಪ್ರತ್ಯಭಿಜ್ಞೆಗೋಸ್ಕರವಾಗಿಯೇ ಉಪಾಧಿ ವಿಶಿಷ್ಟರೂಪವನ್ನು ದ್ವಾರ ಮಾಡಿಕೊಂಡು ಶ್ರುತಿಗಳು ಬ್ರಹ್ಮಾತ್ಮನನ್ನು ಕೊಂಡಾಡುತ್ತಾ ಲಕ್ಷಣೋಪಲಕ್ಷಣಾ ಕ್ರಮದಿಂದ ಅಥವಾ ಅತದ್ವ್ಯಾವೃತ್ತಿ ಅಂದರೆ ಹಾಗಿಲ್ಲದುದನ್ನು ಅಲ್ಲಗಳೆಯುತ್ತಾ ಪರಮಾರ್ಥ ಸತ್ಯವನ್ನೇ ಬೋಧಿಸುವುವು. ಈ ಕ್ರಮದ ಉಪಾಯದಿಂದ ಜೀವಪುರುಷನ ಜ್ಞಾನಕ್ಕೂ ಅವಿಷಯನಾದ ಅವನ ನಿಜಾತ್ಮನ ಅರಿವು ಅವನಿಗೆ ಉಂಟಾಗುವುದು.

ಪರಮಾತ್ಮನು ರಾಮಕೃಷ್ಣಾದ್ಯವತಾರಗಳಲ್ಲಿ ನಾಮರೂಪೋಪಾಧಿ ಸಂಪರ್ಕವಿಟ್ಟುಕೊಂಡು ಲೋಕರಕ್ಷಣೆ - ತತ್ವೋಪದೇಶ ಮೊದಲಾದ ವ್ಯವಹಾರಲೀಲೆಯಿಂದಿರುವನು. ಜೀವಾತ್ಮನು ನಾಮರೂಪಾತ್ಮಕವಾದ ದೇಹೋಪಾಧಿ ವಿಶಿಷ್ಟನಾಗಿ ವಿಶ್ವ ತೈಜಸ ಪ್ರಾಜ್ಞ ಎಂಬ ಮೂರು ಅವಸ್ಥೆಗಳಲ್ಲಿ ಲೋಕವ್ಯವಹಾರದಲ್ಲೇ

ತತ್ಪರನಾಗಿರುವನು. ಜೀವನು ಅಜ್ಞಾನಿಯಾಗಿರುವುದರಿಂದ ಅವನಿಗೆ ತಾನು ನೋಡುವುದು ವ್ಯವಹರಿಸುವುದು ಆತ್ಮನಲ್ಲೇ ಆಗಿದ್ದರೂ ಆ ನಿಜವು ತಿಳಿಯುವುದಿಲ್ಲ. ಈಶ್ವರನು ಮಾಯೆಯಿಂದ ಪ್ರಪಂಚರೂಪದಿಂದಲೇ ತೋರಿಕೊಂಡಿರುವನು. ಅಂತು ಸಮಸ್ತವ್ಯವಹಾರಗಳಿಗೂ ಬ್ರಹ್ಮಾತ್ಮನು ಮೂಲಚಾಲಕನಾಗಿದ್ದರೂ ವಾಸ್ತವವಾಗಿ ವೈಕುಂಠ ಪರಂಧಾಮದಲ್ಲೇ ನಿತ್ಯಾನಂದನಿರತನಾಗಿರುವಂತೆ ಮನುಷ್ಯಾದಿಸಕಲ ಪ್ರಾಣಿಗಳ ಪ್ರತ್ಯಗಾತ್ಮನು ಕೂಟಸ್ಥಸಾಕ್ಷಿಯಾಗಿಯೇ ಇರುತ್ತಿದ್ದು ಸರ್ವದಾ ಶುದ್ಧ ಪರಮಾನಂದನೇ ಆಗಿರುತ್ತಾನೆ. ಅದೇ ಆತ್ಮನ ನಿಜ ಸಹಜಸ್ಥಿತಿ ಎಂದು ಸ್ತುತಿಸಿದ್ದಾರೆ.

ಈಗ ಎರಡನೆಯ ಶ್ಲೋಕ. ಇದರಲ್ಲಿ ಅನಾತ್ಮಸ್ವರೂಪಧರ್ಮವ್ಯಾವೃತ್ತಿಯಿಂದಲೇ ಶ್ರುತಿಗಳು ಆತ್ಮತತ್ತ್ವವನ್ನು ಪ್ರತಿಪಾದನೆ ಮಾಡುವುವೆಂದು ತಿಳಿಸುತ್ತಾ ಸ್ತುತಿಸುತ್ತಾರೆ -

ಬೃಹದುಪಲಬ್ಧಮೇತದವಯಂತ್ಯವಶೇಷತಯಾ
ಯತ ಉದಯಾಸ್ತಮಯೌ ವಿಕೃತೇರ್ಮೃದಿ ವಾಽವಿಕೃತಾತ್ ।
ಅತ ಋಷಯೋ ದಧುಸ್ತ್ವಯಿ ಮನೋವಚನಾಚರಿತಂ
ಕಥಮಯಥಾ ಭವಂತಿ ಭುವಿ ದತ್ತಪದಾನಿ ನೃಣಾಮ್ ॥ ೨ ॥

ಉಪಲಬ್ಧಂ ಏತತ್ = ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿದುಬರುತ್ತಿರುವ ಇದು ಪ್ರಪಂಚ ಎಲ್ಲವೂ ಅಂದರೆ ದೇವ ಪಿತೃ ಮಾನವಾದಿ ವ್ಯಕ್ತಿ ವಿಶೇಷಗಳಿಂದಲೂ ಭೂಜಲಾದಿ ವಸ್ತು ವಿಶೇಷಗಳಿಂದಲೂ ಕೂಡಿರುವಂತೆ ತಿಳಿದುಬರುತ್ತಿದೆಯಲ್ಲವೇ ! ಇದೆಲ್ಲವೂ ಕೂಡ. ಬೃಹತ್ (ಏವ) = ಬ್ರಹ್ಮವಸ್ತುವೇ.

ಏಕೆಂದರೆ - ಅವಶೇಷತಯಾ ಅವಯಂತಿ = ಇದು ಬ್ರಹ್ಮವಲ್ಲ, ಇದು ಸತ್ಯವಲ್ಲ ಎಂದು ಅಲ್ಲಗಳೆದಾಗಲೂ ಕೊನೆಗೆ ನಿರಾಕರಿಸುವ ~~ವಸ್ತು~~ ಸತ್ಯವಾಗಿಯೇ ಉಳಿದುಕೊಳ್ಳುವುದರಿಂದ (ಬ್ರಹ್ಮವೇ ಸತ್ಯವೆಂದು) ನಿಶ್ಚಯಮಾಡುತ್ತಾರೆ. ಇದರ ವಿವರಣೆ - ಪ್ರತೀತಿ ಕಾಲದಲ್ಲಿ ನಾಮರೂಪವುಳ್ಳ ಸಮಸ್ತ ವಸ್ತುಗಳೂ ಜ್ಞಾನಕ್ಕೆ ವಿಷಯವಾಗಿಯೇ ಇರತಕ್ಕವುಗಳಾದ್ದರಿಂದಲೂ, ಅಗಮಾಪಾಯಿಗಳಾಗಿರುವುದರಿಂದಲೂ ಅವು ನಿತ್ಯವಸ್ತುಗಳಲ್ಲ. ಸತ್ಯವಾದವುಗಳಲ್ಲ. ಅನಿತ್ಯ ಅಥವಾ ಮಿಥ್ಯೆ

—— ಆಗಿರುತ್ತವೆ. ಇದು ಬ್ರಹ್ಮವಲ್ಲ ಇದು ಬ್ರಹ್ಮವಲ್ಲ ಎಂದು ಅಲ್ಲಗಳೆಯುತ್ತಾ ಬಂದರೆ ಕೊನೆಯಲ್ಲಿ ಅಲ್ಲಗಳೆಯುವ ಜ್ಞಾನಾತ್ಮನೊಬ್ಬನೇ ಉಳಿದು ಕೊಳ್ಳುವನಷ್ಟೆ ! ಅವನೇ ಸತ್ಯಪರಮಾರ್ಥ ಎಂದು ನಿಶ್ಚಯವಾಗುವುದು. ಆ ಬ್ರಹ್ಮಾತ್ಮನೇ ವಾಸ್ತವ ಸತ್ಯ. ಆದರೂ ತೋರಿಕೊಳ್ಳುವುದೇ ಬ್ರಹ್ಮಾತ್ಮನ ಸ್ವಭಾವವಾಗಿರುವುದರಿಂದ ಮಾಯೆಯಿಂದಲೇ ಬ್ರಹ್ಮನು ಪ್ರಪಂಚ ನಾಮರೂಪದಿಂದ ಎದ್ದುಕೊಂಡು ತೋರಿಕೊಳ್ಳುವನು. ಅಂದಾಗ ಈ ಪ್ರಪಂಚ ಕಾರ್ಯಕ್ಕೆ ಬ್ರಹ್ಮನೇ ಕಾರಣ ಎಂದಾಯಿತು. ಆದ್ದರಿಂದಲೇ, ಯತಃ ಉದಯಾಸ್ತಮಯೌ ಅವಿಕೃತಾತ್ = ವಿಕಾರಗೊಳ್ಳದ ಯಾವುದರ ದೆಸೆಯಿಂದ ಈ ಪ್ರಪಂಚದ ಉದ್ಭವ ವಿನಾಶಗಳು ಉಂಟಾಗುತ್ತಿವೆಯೋ ಅದು ಬ್ರಹ್ಮವಸ್ತುವಾಗಿರುತ್ತದೆ. ಮೃದಿ ವಿಕೃತೇಃ ಇವ = ಮಣ್ಣಿನಲ್ಲಿ ಮಡಿಕೆ ಎಂಬ ವಿಕಾರವುಂಟಾಗುವಂತೆ ಬ್ರಹ್ಮಕ್ಕೂ ಪ್ರಪಂಚಕ್ಕೂ ಕಾರ್ಯಕಾರಣ ಭಾವವಿರುವುದು.ಆದರೆ ಒಂದು ವಿಶೇಷವುಂಟು. ಮಡಿಕೆ ಎಂಬ ಕಾರ್ಯವುಂಟಾದಾಗ ಮಣ್ಣಿನಲ್ಲಿ ವಿಕಾರವುಂಟಾಗುವುದು. ಆದರೆ ಪ್ರಪಂಚಕಾರ್ಯವುಂಟಾದಾಗ ಬ್ರಹ್ಮನಲ್ಲಿ ವಿಕಾರವೇನೂ ಉಂಟಾಗುವುದಿಲ್ಲ.ಆದ್ದರಿಂದ ಮಣ್ಣಿನಂತೆ ಪರಿಣಾಮೀಕಾರಣವಲ್ಲ, ಪ್ರಪಂಚಕ್ಕೆ ಬ್ರಹ್ಮವು ವಿವರ್ತಕಾರಣವಾಗಿದೆ. ಇದರ ವಿವರಣೆ - ಹಗ್ಗದಲ್ಲಿ ಹಾವು ತೋರಿದಾಗ ಭ್ರಮೆಯಿಂದ ಹಾವು ತೋರುತ್ತದೆ. ಹಾಗೆಯೇ ಬ್ರಹ್ಮನಲ್ಲಿ ಪ್ರಪಂಚವು ತೋರುತ್ತದೆ. ಪ್ರಪಂಚಕ್ಕೆ ಬ್ರಹ್ಮವೇ ಕಾರಣ -ಅಧಿಷ್ಠಾನವು. ಅಧಿಷ್ಠಾನವಾದ ಹಗ್ಗದ ನಿಶ್ಚಯಜ್ಞಾನವಾದಾಗ ಕಲ್ಪಿತ ಹಾವು ಹಗ್ಗದಲ್ಲೇ ಅಡಗಿಹೋಗುವುದಷ್ಟೇ ! ಹಾಗೆಯೇ ಪ್ರಪಂಚಾಧಿಷ್ಠಾನವಾದ ಬ್ರಹ್ಮನ ನಿಶ್ಚಯ ಜ್ಞಾನವಾದಾಗ ಬ್ರಹ್ಮನಲ್ಲೇ ಪ್ರಪಂಚವು ಅಡಗಿ ಹೋಗುವುದು. ಬ್ರಹ್ಮಜ್ಞಾನವಿಲ್ಲದಾಗಲೇ ಪ್ರಪಂಚವು ತೋರುವುದು. ಈ ರೀತಿ ಪ್ರಪಂಚಕ್ಕೂ ಬ್ರಹ್ಮಕ್ಕೂ ಕಾರ್ಯಕಾರಣಭಾವವನ್ನು ಗುರುತಿಸಿಕೊಂಡು ಮತ್ತು ಆರೋಪ - ಅಪವಾದ ಪ್ರಕ್ರಿಯೆಯನ್ನು ಅರ್ಥಮಾಡಿಕೊಂಡು, ಸತ್ಯಪರಮಾರ್ಥವನ್ನು ಜೀವರು ತಿಳಿದುಕೊಳ್ಳಲೆಂದೇ ಅದನ್ನು ಬೋಧಿಸುವುದಕ್ಕಾಗಿಯೇ, ಋಷಯಃ ತ್ವಯಿ ಮನೋವಚನಾಚರಿತಂ ದಧುಃ = ಋಷಯಃ = ವಿಚಾರ ಪರೀಕ್ಷೆಗಳಿಂದ ಸೂಕ್ಷ್ಮವನ್ನು ಅರಿತುಕೊಂಡ ಋಷಿಗಳು ಹಾಗೂ ಶ್ರುತಿಗಳು. ತ್ವಯಿ = ಪರಮಾತ್ಮನೇ ಆದ ನಿನ್ನಲ್ಲಿ. ಮನ ಆಚರಿತಂ.ವಚನಾಚರಿತಂ = ತಾತ್ಪರ್ಯವಾದ ಬುದ್ಧಿನಿಶ್ಚಯವನ್ನು ಹಾಗೂ ಸ್ತುತಿ ಮತ್ತು ಉಪದೇಶರೂಪವಾದ ವಾಕ್ ಪ್ರವೃತ್ತಿಯನ್ನೂ. ದಧುಃ = ಕೈಗೊಂಡಿರುತ್ತಾರೆ.

ತತ್ ತ್ವಮಸಿ = ದೇವನು ನೀನಾಗಿರುವೆ ಎಂಬೀ ಮಾತಿನಲ್ಲಿ



—— ಅಂದರೆ - ಕಾರ್ಯಗಳ ಮತ್ತು ಕಾರಣಗಳ ಗ್ರಹಣೆಯಾಗುತ್ತಿರುವಾಗ ಅಲ್ಲಿ ಪ್ರಕೃತಿ ವಿಕೃತಿ ಭಾವವನ್ನು ಗುರುತಿಸಿಕೊಟ್ಟು, ಆಗ ಕಾರಣ ಪ್ರಕೃತಿಯಾದ ಬ್ರಹ್ಮಾತ್ಮನಲ್ಲಿ ಮಾಯಾವಿದ್ಯಾ ಉಪಾಧಿ ವೈಶಿಷ್ಟ್ಯ ಇರುವುದನ್ನು ತೋರಿಸಿಕೊಟ್ಟು, ಸತ್ಯಾಧಿಷ್ಠಾನ ಪ್ರಜ್ಞೆಯನ್ನುಂಟು ಮಾಡಲೆಂದೇ, ಆರೋಪ ಅಥವಾ ಕಲ್ಪನಾ ವಿಷಯಗಳನ್ನೇ ಅಂದರೆ ಇಂದ್ರ, ಅಗ್ನಿ, ಜೀವ, ಈಶ್ವರ, ಭೂ, ಜಲ ಇತ್ಯಾದಿ ಜಗತ್ ಪದಾರ್ಥಗಳನ್ನು ವಾಚ್ಯವಾಗಿ ಬೋಧಿಸಿದ್ದರೂ ಲಕ್ಷಣೆಯಿಂದ ಮುಖ್ಯ ತಾತ್ಪರ್ಯ ವಿಷಯವಾದ ಸರ್ವಾಧಿಷ್ಠಾನವಾದ ಬ್ರಹ್ಮವನ್ನೇ ತಿಳಿಸಿಕೊಟ್ಟಂತಾಗುತ್ತದೆ. ಅದು ಹೇಗೆಂದರೆ - ನೃಣಾಂ ಭುವಿ ದತ್ತಪದಾನಿ ಕಥಂ ಅಯಥಾ ಭವಂತಿ = ಮನುಷ್ಯರು ಭೂಮಿಯ ಮೇಲೆ ನಿಲ್ಲಬೇಕೆಂಬ ಉದ್ದೇಶದಿಂದ ಹೆಜ್ಜೆ ಇಟ್ಟಾಗ ಕಲ್ಲಮೇಲೆ ಅಥವಾ ಇಟ್ಟಿಗೆಯ ಮೇಲೆ ಎಲ್ಲೇ ಹೆಜ್ಜೆ ಇಡಲಿ ಅದು ಭೂಮಿಯ ಮೇಲೆಯೇ ಹೆಜ್ಜೆ ಇಟ್ಟಂತಾಗುವುದಷ್ಟೇ ! ಹಾಗೆಯೇ ಅಪ್ರಮೇಯ ಬ್ರಹ್ಮಾತ್ಮವಸ್ತುವನ್ನು, ಅಂದರೆ ಶ್ರೋತೃಪ್ರಮಾತೃವಿನ ಪ್ರತ್ಯಗಾತ್ಮನನ್ನು ವಾಚ್ಯವಾಗಿ ಹೇಳಲೂ ಮತ್ತು ತಿಳಿಯಲೂ ಅಶಕ್ಯವಾದರೂ ಭಾಗತ್ಯಾಗಲಕ್ಷಣಾ ಎಂಬ ಉಪಾಯದಿಂದ ಮುಖ್ಯಾತ್ಮನನ್ನು ಕಂಡುಕೊಳ್ಳಬಹುದಾಗಿದೆ.

ಹೇಳುವುದನ್ನು ^ ಮಾಯಾವಿಶಿಷ್ಟಚೇತನನನ್ನು ಮತ್ತು ಅವಿದ್ಯಾವಿಶಿಷ್ಟಚೇತನನನ್ನು ಇಬ್ಬರನ್ನು ಶಬ್ದದಿಂದ ಏಕಾರ್ಥವಾಗಿರುವಂತೆ ಹೇಳಿದಾಗ ಅವಾಂತರವಾಕ್ಯಗಳ ಸಹಾಯದಿಂದ ಮತ್ತು ತಾತ್ಪರ್ಯಪರ್ಯಾಲೋಚನೆಯಿಂದ ಅವಿದ್ಯಾ ಮಾಯಾ ಅಂಶಗಳನ್ನು ತ್ಯಜಿಸಿ ಶುದ್ಧಚೇತನಾಂಶಕ್ಕೆ ಅಭೇದವನ್ನು ಗ್ರಹಿಸಿಕೊಳ್ಳುವುದೇ ಭಾಗತ್ಯಾಗಲಕ್ಷಣಾವೃತ್ತಿಯ ಕ್ರಮವಾಗಿರುತ್ತದೆ. ಇದು ಈ ಶ್ಲೋಕದಲ್ಲಿ ಪ್ರತಿಪಾದಿಸಿರುವ ಪರಿಣಾಮಕಾರಣ ಮತ್ತು ವಿವರ್ತಕಾರಣ ಎಂಬ ಪ್ರಕ್ರಿಯೆಯ ಕ್ರಮವಾಗಿದೆ. ಇನ್ನು ಶ್ಲೋಕದ ಪ್ರಥಮಪಾದದಿಂದ ತಿಳಿಸಿರುವ ಕ್ರಮದಂತೆ ಅಪವಾದ ಪ್ರಕ್ರಿಯೆಯಿಂದಲೂ ಮೊದಲು ವಿವರಿಸಿರುವಂತೆ ದೃಶ್ಯ ವಿಷಯಗಳನ್ನೆಲ್ಲಾ ~~(ಕಲ್ಪಿತಾಂಶಗಳನ್ನೆಲ್ಲಾ)~~ ಇದು ಬ್ರಹ್ಮವಲ್ಲ, ಇದು ಬ್ರಹ್ಮವಲ್ಲ ಎಂದು ಅಪವಾದ ಮಾಡಿ ಹೊರತಳ್ಳುವುದೇ ಅತದ್ಧರ್ಮವ್ಯಾವೃತ್ತಿಯಾಗಿದೆ. ಹೀಗೆ ದೇಹಾದಿಗಳನ್ನು ವ್ಯಾವೃತ್ತಿ ಮಾಡಿಕೊಂಡಾಗ ಕೊನೆಗೆ ತಳ್ಳುವಾತನೇ ಉಳಿದುಕೊಳ್ಳುವನು. ಅವನೇ ನಿಜವಾದ ಆತ್ಮನು. ಅವನೇ ಪರಮಾತ್ಮನು ಎಂದು ಬೋಧಿಸುತ್ತಾ ಸ್ತುತಿಸಲಾಗಿದೆ.

ಈಗ ಮೂರನೆ ಶ್ಲೋಕಕ್ಕೆ ಅವತರಣಿಕೆ
^ ದಾಸೋऽಹಂ ಎಂಬುದೊಂದು ಉಪದೇಶ. ಇದು ಪ್ರಪತ್ತಿ ಅಥವಾ

ಭಕ್ತಿಪ್ರಸ್ಥಾನವು. ಸೋऽಹಂ ಎಂಬುದೂ ಒಂದು ಉಪದೇಶ. ಇದು ಪ್ರತಿಪತ್ತಿ ಅಥವಾ ವಿದ್ಯಾ ಪ್ರಸ್ಥಾನವು. ಈ ಎರಡು ಪ್ರಸ್ಥಾನಗಳೂ ವೇದೋಕ್ತವಾಗಿವೆ ಎಂದು ಸೂಚಿಸುತ್ತಾ ಸ್ತುತಿಸುವ ಶ್ಲೋಕ-

ಇತಿ ಸೂರಯಸ್ತ್ರ್ಯಧಿಪತೇऽಖಿಲಲೋಕಮಲ-
ಕ್ಷಪಣಕಥಾಮೃತಾಬ್ಧಿಮವಗಾಹ್ಯ ತಪಾಂಸಿ ಜಹುಃ।
ಕಿಮುತ ಪುನಃ ಸ್ವಧಾಮವಿಧುತಾಶಯಕಾಲಗುಣಾಃ
ಪರಮ ಭಜಂತಿ ಯೇ ಪದಮಜಸ್ರಸುಖಾನುಭವಂ ॥೩॥

ಹೇ ತ್ರ್ಯಧಿಪತೇ = ತ್ರಿಲೋಕಾಧಿಪತಿಯೂ, ತ್ರಿಗುಣಮಾಯಾಧ್ಯಕ್ಷನೂ ಆದ ಮಹಾಪ್ರಭೋ, ಇತಿ ಸೂರಯಃ = ಮೇಲೆ ಪ್ರತಿಪಾದಿಸಿರುವಂತೆ ಕಾರ್ಯವೆಲ್ಲವೂ ಕಾರಣ ಮಾತ್ರಪರಮಾರ್ಥವುಳ್ಳವೆಂದೂ, ಕಾರ್ಯವಿಕಲ್ಪ - ವಿಕಾರಗಳೆಲ್ಲವೂ ಕೇವಲ ಮಿಥ್ಯಾ ಎಂದೂ ನಿಶ್ಚಯಮಾಡಿಕೊಂಡ ಜಾಣರು (ವಿಚಾರಪೂರ್ವಕ ತತ್ತ್ವಜ್ಞಾನ ಮಾಡಿಕೊಂಡಿರದಿದ್ದರೂ) ತವ ಅಖಿಲ ಲೋಕಮಲ ಕ್ಷಪಣ ಕಥಾಮೃತಾಬ್ಧಿಂ ಅವಗಾಹ್ಯ ತಪಾಂಸಿ ಜಹುಃ = ಸಮಸ್ತಲೋಕಗಳ ಜನರ ಸಕಲ ಪಾಪಗಳನ್ನು ಕಳೆಯುವಂತಹ ನಿನ್ನ ರಾಮಕೃಷ್ಣಾದ್ಯವತಾರ ಕಥೆಗಳನ್ನು ಅಮೃತಸಿಂಧು ಎಂದು ನಂಬಿಕೊಂಡು ಆ ಪುಣ್ಯತೀರ್ಥದಲ್ಲಿ ಮಿಂದು, ಅಂದರೆ ಭಕ್ತಿ ಪ್ರೀತ್ಯಾದರಗಳಿಂದ ಆ ಕಥೆಗಳನ್ನು ಶ್ರವಣಮಾಡುವ ನಿನ್ನ ಉಪಾಸಕರಾದ ಭಕ್ತರು ಈ ಸಂಸಾರದ ತಾಪಗಳನ್ನೆಲ್ಲಾ ಪರಿಹರಿಸಿಕೊಂಡಿರುವರು ಮತ್ತು ಅವರು ಬೇರೆ ತಪಸ್ಸು (ತತ್ವಜಿಜ್ಞಾಸೆ) ಮಂತಾದ ಸಾಧನೆ - ಪ್ರಯತ್ನಗಳನ್ನು ತ್ಯಜಿಸಿಬಿಟ್ಟಿರುವರು. ಆ ಜಾಣರು ಪರಮಪುರುಷಾರ್ಥವನ್ನೇ ಪಡೆದುಕೊಂಡಿರುವರು. ಇದು ಪ್ರಪತ್ತಿಮಾರ್ಗದಿಂದ ಸಿದ್ಧವಾಗುವ ಫಲವು. ಈಗ ಪ್ರತಿಪತ್ತಿಮಾರ್ಗದ ಯತ್ನದಿಂದ ಆಗುವ ಲಾಭವನ್ನು ಹೇಳುತ್ತಾರೆ - ಕಿಮುತ ಪುನಃ - ಅಂದಾಗ ಮತ್ತೆ ಹೇಳಬೇಕಾದ್ದೇನಿದೆ ! ಹೇ ಪರಮ = ಎಲೈ ಪರಮಾತ್ಮನೇ, ಯೇ ಸ್ವಧಾಮವಿಧುತಾಶಯಕಾಲಗುಣಾಃ = ಯಾರು ತತ್ತ್ವವಿಚಾರ ಪರೀಕ್ಷಾಪೂರ್ವಕವಾಗಿ ತಮ್ಮ ಪ್ರತ್ಯಗಾತ್ಮನೇ ಆಗಿರುವ ನಿನ್ನ ಮಹಾಮಹಿಮಾನ್ವಿತ ಸ್ವರೂಪವನ್ನು ಕಂಡುಕೊಳ್ಳುವ ಮೂಲಕ ರಾಗದ್ವೇಷಾದಿದೋಷಗಳನ್ನೂ, ಜರಾರೋಗಾದ್ಯುಪದ್ರವಗಳನ್ನೂ, ಕಾಲ

—— ಕರ್ಮಬಂಧನಗಳನ್ನೂ, ಗುಣತ್ರಯವೈಷಮ್ಯವನ್ನೂ ಸಹ ಕಳೆದುಕೊಳ್ಳುವರೋ ಅಂತಹ ತತ್ವಜ್ಞಾನಿಗಳು. ಅಜಸ್ರಸುಖಾನುಭವಂ ಪದಂ ಭಜಂತಿ (ಇತಿ ಕಿಮು ಪುನಃ ವಕ್ತವ್ಯಂ) ನಿತ್ಯನಿರಂತರಾನಂದಾನುಭವವೆಂಬ ಪರಮಪದವನ್ನು ಅಂದರೆ ಬ್ರಹ್ಮೀಭಾವವನ್ನು ಹೊಂದುತ್ತಾರೆಂದೂ ಸಂಸಾರಕ್ಲೇಶಗಳನ್ನು ನೀಗಿಕೊಳ್ಳುತ್ತಾರೆಂದೂ ಮತ್ತೆ ಹೇಳಬೇಕೇ! ತತ್ತ್ವಜ್ಞಾನವಿಲ್ಲದಿದ್ದರೂ ಭಕ್ತಿಯಿಂದ ಭಗವದುಪಾಸಕರಾಗಿ ಭಗವತ್ಕಥೆಗಳನ್ನು ಶ್ರವಣಮಾಡುತ್ತಿದ್ದರೆ ಮುಕ್ತಿದೊರೆಯುವುದೆಂದು ಶಿಷ್ಟಜನರು ಸ್ವಾನುಭವದಿಂದ ಹೇಳುತ್ತಿರುವಾಗ ಇನ್ನು ಸೋಽಹಂ ಎಂದು ಸಾಕ್ಷಾದಪರೋಕ್ಷಜ್ಞಾನಮಾಡಿಕೊಂಡವರಿಗೆ ಮುಕ್ತಿಸಿದ್ಧಿಯಾಗುವುದೆಂದು ಪುನಃ ಹೇಳಬೇಕೆ ? ಇಂತು ಈ ಎರಡು ಉಪದೇಶಗಳಲ್ಲಿ ಯಾವುದಾದರೊಂದು ಉಪದೇಶವನ್ನು ಗ್ರಹಿಸಿಕೊಂಡು ಭಗವದಭಿಮುಖನಾಗಬೇಕು. ಇಲ್ಲದಿದ್ದರೆ -

ದೃತಯ ಇವ ಶ್ವಸಂತ್ಯಸುಭೃತೋ ಯದಿ ತೇಽನುವಿಧಾಃ
ಮಹದಹಮಾದಯೋಽಂಡಮಸೃಜನ್ ಯದನುಗ್ರಹತಃ ।
ಪುರುಷವಿಧೋಽನ್ವಯೋಽತ್ರ ಚರಮೋಽನ್ನಮಯಾದಿಷು ಯಃ
ಸದಸತಃ ಪರಂ ತ್ವಮಥ ಯದೇಷ್ವವಶೇಷಮೃತಮ್ ॥೪॥

ದೃತಯ ಇವ ಶ್ವಸಂತಿ = ~~ಭಗವದ್ಭಕ್ತರಲ್ಲದ~~ ಲೋಕದ ಜನರು ಕಮ್ಮಾರಸಾಲೆಯ ತಿದಿಯಂತೆ ಕೇವಲ ಬುಸ್‌ಬುಸ್ ಎಂದು ಉಸಿರಾಡಿಕೊಂಡಿರುವರು. ಅವರ ಬದುಕು ವ್ಯರ್ಥವೇ ಸರಿ. ಅಸುಭೃತಃ = ಮನುಷ್ಯಾದಿಪ್ರಾಣಿಗಳು. ತೇ ಅನುವಿಧಾಃ ಯದಿ = ನಿನ್ನ ಪರಮಾತ್ಮನ ಭಕ್ತಿ ಭಜನಾದಿ ಉಪಾಸನೆಗಳಿಂದ ಅನುವರ್ತಿಸಿಕೊಂಡಿದ್ದರೆ. ಆಗಲೇ ತೇ ಶ್ವಸಂತಿ = ಅವರು ನಿಜವಾಗಿ ಜೀವಿಸಿಕೊಂಡಿರುತ್ತಾರೆನ್ನಬೇಕು. ಅವರ ಉಸಿರಾಟ, ಬದುಕು ಪ್ರಶಸ್ತವೆನ್ನಬಹುದು. ಭಗವದ್ವಿಮುಖರಾದ ಮರ್ತ್ಯರು ದೇವರನ್ನು ಮರೆತುಕೊಂಡೇ ಇದ್ದು ಸ್ವೇಚ್ಛೆಯಿಂದ ಕರ್ಮವ್ಯವಹಾರ ಮಾಡುತ್ತಾ ಮೋಹಪರವಶರಾಗಿದ್ದರೂ ಅವರಿಗೆ ಪರಮಾತ್ಮನ ಹಂಗೇ ಇಲ್ಲವೆಂದು ಹೇಳುವಂತಿಲ್ಲ. ಏಕೆಂದರೆ - ಯದನುಗ್ರಹತಃ ~~ಮಹದಹಮಾದಯಃ~~ ಮಹದಹಮಾದಯಃ ಅಂಡಂ ಅಸೃಜನ್ = ಯಾವನ ಚೈತನ್ಯಾನುಗ್ರಹದಿಂದ ಅಂದರೆ ಅನುಪ್ರವೇಶ, ಸಾಂನಿಧ್ಯದಿಂದಲೇ ಸೃಷ್ಟಿಯ ಆದಿಕಾಲದಿಂದಲೂ ಬುದ್ಧಿ ಮನೋ

—— ಅಹಂಕಾರಾದಿಗಳು ಕಾಯಾಂಡಾದಿಗಳನ್ನು ಉಂಟುಮಾಡಿಯೂ ಮತ್ತೆ ಅವು ಸ್ವವಿಷಯಗಳಲ್ಲಿ ಪ್ರವರ್ತಿಸಿಕೊಂಡಿರುವುದರಿಂದಲೇ ಈ ಸೂಕ್ಷ್ಮ ಸ್ಥೂಲ ಶರೀರೇಂದ್ರಿಯಗಳು ಉಂಟಾಗಿರುತ್ತವೆ. ಬುದ್ಧಿ ಅಹಂಕಾರಾದಿಗಳು ಜಡಪ್ರಕೃತಿಯ ಪರಿಣಾಮ ಕಾರ್ಯಗಳಾಗಿರುವುದರಿಂದ ಆವೂ ಜಡಗಳೇ. ಅವು ಸ್ವತಂತ್ರವಾಗಿ ಏನೊಂದು ವ್ಯಾಪಾರವನ್ನೂ ಮಾಡಲೇ ಆರವು. ಈ ವಸ್ತುಸ್ಥಿತಿಯನ್ನು ಅರಿಯದೆಯೂ, ಭಗವದ್ಭಜನೆಯನ್ನು ಮಾಡದೆಯೂ ಇರುವ ಮೂಢಜನರು ಕೃತಘ್ನರೇ ಸರಿ. ಆದರೂ ಪರಮಾತ್ಮನು ಕರುಣಾಳುವಾಗಿರುವುದರಿಂದ ಸಕಲ ಜೀವಪ್ರಾಣಿಗಳ ಜೀವನ ಭೋಗಕ್ಕೋಸ್ಕರ ಸೃಷ್ಟಿಮಾಡಿಯೇ ಇರುತ್ತಾನೆ. ಹಾಗೂ ಸಮಸ್ತ ಜೀವರ ಮನೋಬುದ್ಧಿ ಅಹಂಕಾರಾದಿಗಳಲ್ಲಿ ಅನುಪ್ರವೇಶಿಸಿ ಚೇತನಗೊಳಿಸಿರುವುದರಿಂದಲೇ ಮನುಷ್ಯಾದಿ ಪ್ರಾಣಿಗಳು ಕರ್ಮಮಾಡುತ್ತಲೂ ಕರ್ಮಫಲವನ್ನು ಅನುಭವಿಸುತ್ತಲೂ ಇರುವರು. ಹೀಗೆ ಅಂತರ್ಯಾಮಿಯ ಅನುಗ್ರಹವಿರುವುದರಿಂದಲೇ ಈ ಸಮಷ್ಟಿ ವ್ಯಷ್ಟಿರೂಪದ ಸ್ಥೂಲ ಸೂಕ್ಷ್ಮದೇಹಗಳು ಹುಟ್ಟಿ ಚೇಷ್ಟಿಸಿಕೊಂಡಿರುತ್ತವೆ. ಇಂತು ಉತ್ಪನ್ನವಾದ ದೇಹವನ್ನು ಅನ್ನಮಯಾದಿ ಪಂಚಕೋಶಗಳೆಂದು ಪಂಚಪ್ರಕಾರವಾಗಿ ವಿಭಜಿಸಿ ವಿವೇಚನೆ ಮಾಡಿ ನೋಡಿದರೆ ಆ ಎಲ್ಲಾ ಕೋಶಗಳಲ್ಲೂ ಚೇತನಾತ್ಮನೇ ತುಂಬಿರುತ್ತಿದ್ದು ಅವನ್ನು ಚೇತನಗೊಳಿಸುತ್ತಿರುವನೆಂದು ತಿಳಿಯುವುದು. ಆದ್ದರಿಂದಲೇ ಆತ್ಮನನ್ನು ಪುರುಷವಿಧ ಎಂದು ವೇದವು ಕರೆದಿರುವುದು. ಪುರುಷವಿಧಃ ಅನ್ವಯಃ = ಮನುಷ್ಯಾಕಾರದಂತೆಯೇ ಆತ್ಮನು ಎಲ್ಲಾ ಕೋಶಗಳನ್ನೂ ವ್ಯಾಪಿಸಿಕೊಂಡಿರುವನು, ಅತ್ರ ಅನ್ನಮಯಾದಿಷು ಯಃ ಚರಮಃ = ಈ ಅನ್ನಮಯಾದಿ ಪಂಚಕೋಶ ಪ್ರತಿಪಾದನ ಕ್ರಮದಲ್ಲಿ ಕೊನೆಯದಾದ ಆಂತರ ಆನಂದಮಯಕೋಶದಲ್ಲಿಯೂ ಅಂತರ್ಯಾಮಿಯಾಗಿ ಅನ್ವಯಿಸಿಕೊಂಡಿರುವ ಚೇತನನನ್ನೇ ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂದು ಗೊತ್ತುಮಾಡಿಕೊಟ್ಟಿದೆ. ಹೀಗೆ ಅಂತರನ್ವಿತನಾಗಿರುವ ಪ್ರತ್ಯಗಾತ್ಮನನ್ನೇ ಹುಡುಕಿ ತಿಳಿಸಿಕೊಡಲಾಗಿದೆ. ಆ ವಸ್ತುವು. ಸದಸತಃ ಪರಂತ್ವಂ = ಮೂರ್ತಾಮೂರ್ತ ವಸ್ತುಗಳಿಗಿಂತ, ಸ್ಥೂಲ ಸೂಕ್ಷ್ಮ(ಶರೀರ) ಗಳಿಗಿಂತ, ಭಾವಾ ಭಾವ ವಸ್ತುಗಳಿಂದ ಕಾರ್ಯಕಾರಣಗಳಿಗಿಂತ ಬೇರೆ. ಅವಕ್ಕೆ ಸಾಕ್ಷಿಯಾಗಿ ನೀನು ಪ್ರತ್ಯಗಾತ್ಮನು ವ್ಯತಿರಿಕ್ತನೇ ಆಗಿದ್ದೀಯೆ ಮತ್ತು ಅಥ ಏಷುಯತ್ ಅವಶೇಷಂ ತದ್ ಋತಂ ತ್ವಂ = ಈ ಅನ್ನಮಯಾದಿ ನಾಮರೂಪಗಳಲ್ಲಿ ಯಾವುದು ಬಾಧೆಗೆ =

ಅಪವಾದಕ್ಕೆ ಒಳಗಾಗುವುದಿಲ್ಲವೋ ಅದೇ ಸತ್ಯವಸ್ತುವು. ಹೊರತಳ್ಳುವವನು ನೀನು ಉಳಿದುಕೊಳ್ಳುವವನು ಆಗಿದ್ದೀಯೆ. ಅಂದರೆ - ಸಕಲ ನಾಮರೂಪಗಳೂ ಆತ್ಮನಲ್ಲಿ ಆರೋಪಿತವಾಗಿರುತ್ತವೆ. ಅವೆಲ್ಲವೂ ಆಗಮಾಪಾಯಿಗಳು. ಅಪವಾದಕ್ಕೆ ಹೊರತಳ್ಳುವುದಕ್ಕೆ ಅರ್ಹವಾಗಿರುತ್ತವೆ. ಆರೋಪಸ್ಥಳದಲ್ಲಿ ಅಧಿಷ್ಠಾನವೇ ಸತ್ಯವಸ್ತುವಾಗಿರುವುದರಿಂದ ಆಗುಂತಕವಾದ ನಾಮರೂಪಗಳು ಅಲ್ಲಗಳೆಯಲ್ಪಡುತ್ತವೆ. ಇದು ಬ್ರಹ್ಮವಲ್ಲ ಇದು ಬ್ರಹ್ಮವಲ್ಲ ಎಂದು ತಿಳಿಯುವಾತನು ಎಲವನ್ನೂ ಹೊರತಳ್ಳಿದಾಗ ಆ ತಳ್ಳುವ ಆತ್ಮನೇ ಕೊನೆಯಲ್ಲಿ ಉಳಿದುಕೊಳ್ಳುವನು. ಅವನೇ ಸತ್ಯ ಬ್ರಹ್ಮನು ಎಂದು ಪರಿಚಯ ಮಾಡಿಕೊಡಲಾಗಿದೆ.

ಜಿಜ್ಞಾಸುಗಳ ಗ್ರಹಣಸೌಕರ್ಯಕ್ಕೋಸ್ಕರ ವೇದವು ಸ್ಥೂಲ ಸೂಕ್ಷ್ಮಕ್ರಮವನ್ನು ಕಲ್ಪಿಸಿ ಪಂಚಕೋಶ ಪ್ರಕ್ರಿಯೆಯಿಂದ ಮನುಷ್ಯನಿಗೆ ಅವನ ಅಂತರಾತ್ಮನನ್ನು ತಿಳಿಸಿಕೊಡುತ್ತದೆ. ಆತ್ಮನು ಸ್ಥೂಲ ಅನ್ನಮಯ ಕೋಶ ಆದಿಯಾಗಿ ಸೂಕ್ಷ್ಮವಾದ ಆನಂದಮಯಾಂತ ಕೋಶಗಳಲ್ಲಿ ತುಂಬಿರುತ್ತಾನೆಂದು ಉಪದೇಶಿಸಿದೆ. ಈ ಕ್ರಮಕ್ಕೆ ಶಾಖಾಚಂದ್ರನ್ಯಾಯ ಎನ್ನುತ್ತಾರೆ. ಚಂದ್ರನ ಸೂಕ್ಷ್ಮಕಲೆಯನ್ನು ಕಾಣಿಸಿಕೊಡುವುದಕ್ಕೆ ಮರದಕೊಂಬೆಯ ತುದಿಯನ್ನು ನೋಡಿ ಚಂದ್ರನು ಕಾಣುತ್ತಾನೆ ಎನ್ನುತ್ತಾರೆ. ಕೊಂಬೆಗೂ ಚಂದ್ರನಿಗೂ ವಸ್ತುತಃ ಸಂಬಂಧ ಇರವುದಿಲ್ಲ. ಆದರೂ ಮರದ ಕೊಂಬೆಯನ್ನು ಅನುಸರಿಸಿ ನೋಡುವವರಿಗೆ ಚಂದ್ರನು ನೋಡಲು ಸಿಕ್ಕುವನು. ಇದು ಲೋಕದಲ್ಲಿ ದೃಷ್ಟವಾಗಿದೆ. ಹಾಗೆಯೇ ಇಲ್ಲಿಯೂ ಗ್ರಹಿಸಬೇಕು. ಮನುಷ್ಯನಿಗೆ ಅವನ ಅಂತರಾತ್ಮನು ಸಾಕ್ಷಾದಪರೋಕ್ಷವೇ ಆಗಿರುತ್ತಾನೆಂಬುದನ್ನು ಅನುಭವಕ್ಕೆ ತಂದುಕೊಡಲೆಂದೇ ವೇದವು ಈರೀತಿ ಪರಮಾತ್ಮನನ್ನು ಸ್ತುತಿಸುತ್ತಾ ಮನುಷ್ಯನನ್ನು ಮೋಹನಿದ್ರೆಯಿಂದ ಎಚ್ಚರಪಡಿಸುತ್ತದೆ. ಪ್ರಬೋಧಿಸುತ್ತದೆ.

ಇದು ಈಗ ಐದನೆಯ ಶ್ಲೋಕ. ಇದರಲ್ಲಿ ಪರಮಾತ್ಮನನ್ನು ಸ್ತುತಿಸುವ ವೇದೋಪನಿಷತ್ತುಗಳ ಉಪದೇಶವನ್ನು ಸಾಮಾನ್ಯವಾಗಿ ಗ್ರಹಿಸಿಕೊಂಡು ಅನುಷ್ಠಾನ ಮಾಡುವ ಶಿಷ್ಟಜನರ ಸದಾಚಾರ, ಸಾಧನಾಕ್ರಮವನ್ನು ವಿವರಿಸುತ್ತಾ ಸ್ತುತಿಸುತ್ತಾರೆ -

ಉದರಮುಪಾಸತೇ ಯ ಋಷಿವರ್ತ್ಮಸು ಕೂರ್ಪದೃಶಃ

ಪರಿಸರಪದ್ಧತಿಂ ಹೃದಯಮಾರುಣಯೋ ದಹರಂ।
ತತ ಉದಗಾದನಂತ ತವ ಧಾಮ ಶಿರಃ ಪರಮಂ
ಪುನರಿಹ ಯತ್ ಸಮೇತ್ಯ ನ ಪತಂತಿ ಕೃತಾಂತಮುಖೇ ॥೫॥

ಋಷಿವರ್ತ್ಮಸು = ಕ್ರಾಂತದರ್ಶಿಗಳಾದ ಋಷಿಮುನಿಗಳ ಮತ್ತು ಪರಮಾರ್ಥವನ್ನೇ ತಿಳಿಸುವ ತಾತ್ಪರ್ಯವುಳ್ಳ ವೇದೋಪನಿಷತ್ತುಗಳ ಉಪದೇಶಮಾರ್ಗದಲ್ಲಿರುವ ಶಿಷ್ಟಜನರ ಪೈಕಿ, ಯೇ ಕೂರ್ಪದೃಶಃ = ಯಾರು ಸ್ಥೂಲದೃಷ್ಟಿಯವರೋ (ಶಾರ್ಕ-ರಾಕ್ಷ ಮೊದಲಾದವರು) ಅವರು. ಉದರಂ ಉಪಾಸತೇ = ಉದರಂ ಬ್ರಹ್ಮೇತ್ಯುಪಾಸೀತ ಎಂಬ ವೇದೋಪದೇಶವಷ್ಟನ್ನೇ ಗ್ರಹಿಸಿಕೊಂಡು ಉದರಾಲಂಬನವಾಗಿ ಬ್ರಹ್ಮವನ್ನು ಉಪಾಸಿಸುತ್ತಾರೆ. ಅವರ ಶ್ರದ್ಧೆ-ಆಶಯವೇನೆಂದರೆ - ಜೀವರ ಸ್ಥಿತಿಗತಿಗಳಿಗೆ ಹೊಟ್ಟೆಯೇ ಪ್ರಧಾನವಾಗಿದೆ. ಮನುಷ್ಯನ ಸಕಲ ಜ್ಞಾನಕರ್ಮವ್ಯವಹಾರಗಳಿಗೂ ಆಹಾರ ತುಂಬಿದ ಹೊಟ್ಟೆಯೇ ಆಧಾರವಾಗಿರುತ್ತದೆ. ಜಠರಕೋಶವು ಬರಿದಾಗಿ ಶಕ್ತಿಕುಂದಿದ್ದರೆ ಏನೊಂದು ವ್ಯವಹಾರವೂ ನಡೆಯಲಾರದು. ಹೀಗೆಂಬುದನ್ನು ನಿಶ್ಚಯ ಮಾಡಿಕೊಂಡ ಅಂತಹ ಸಾಧಕರು ಉದರವನ್ನೇ ಬ್ರಹ್ಮ ಎಂದು ಉಪಾಸನೆ ಮಾಡುತ್ತಾರೆ. ಮತ್ತು ಆ ಉಪಾಸನೆಯ ಫಲವನ್ನೂ ಅವರು ಪಡೆಯುವರು. ಶ್ರೇಯಸ್ಸಾಧನೆಯಲ್ಲಿ ಇದೊಂದು ಕ್ರಮವಾಗಿದೆ. ಇನ್ನೊಂದು ವೇದೋಕ್ತ ಸೂಕ್ಷ್ಮವಾದ ಸಾಧನಾಕ್ರಮ ಏನೆಂದರೆ - ಆರುಣಯಃ = ಆರುಣಿಗಳ ಗುಂಪಿನಲ್ಲಿ ಕೆಲವರು, ಪರಿಸರ ಪದ್ಧತಿಂ ಹೃದಯಂ = ಹೃದಯಂ ಬ್ರಹ್ಮೇತ್ಯುಪಾಸೀತ ಎಂಬ ಉಪದೇಶವನ್ನು ಶ್ರದ್ಧೆಯಿಂದ ಗ್ರಹಿಸಿಕೊಂಡು ಹೃದಯಾಲಂಬನ ಬ್ರಹ್ಮನ ಉಪಾಸನೆ ಮಾಡುವರು. ಅವರ ನಿಶ್ಚಯವೇನೆಂದರೆ - ಚೈತನ್ಯಶಕ್ತಿಸಂಚಾರವನ್ನು ಪರೀಕ್ಷಿಸಿದಾಗ ಶರೀರದೊಳಗೆ ಹೃದಯಮೂಲಕವಾಗಿ ನಾಡಿಗಳಲ್ಲಿ ಶಕ್ತಿಯು ಕ್ರಮವಾಗಿ ಸಂಚರಿಸುವುದು ಅನುಭವಕ್ಕೆ ಬರುವುದಾದ್ದರಿಂದ ಆ ಶಕ್ತಿಮೂಲವಾದ ಹೃದಯವನ್ನೇ ಬ್ರಹ್ಮವೆಂದು ಉಪಾಸನೆ ಮಾಡಿ ಅದರ ಫಲವನ್ನು ಪಡೆದುಕೊಂಡವರಾಗಿರುತ್ತಾರೆ. ಮತ್ತೆ ಆರುಣಿಗಳಲ್ಲಿ ಕೆಲವರು ಸೂಕ್ಷ್ಮದರ್ಶಿಗಳು. ದಹರಂ = ದಹರಂ ಬ್ರಹ್ಮೇತ್ಯುಪಾಸೀತ ಎಂಬ ಉಪದೇಶವನ್ನು ಮುಖ್ಯವೆಂದು ಗ್ರಹಿಸಿಕೊಂಡು ದಹರವೆಂಬ ಹೃದಯಾಕಾಶವನ್ನು ಆಲಂಬನ ಮಾಡಿಕೊಂಡು ಬ್ರಹ್ಮವನ್ನು ಉಪಾಸಿಸಿದವರಾಗಿದ್ದಾರೆ. ಇವರ ಚಿಂತನೆ ಏನೆಂದರೆ - ಹೃದಯ ಎಂದರೆ ಮಾಂಸಪಿಂಡ ಎಂದರ್ಥವಲ್ಲ, ಹೃದಯಕೋಶದಲ್ಲಿರುವ

—— ಆಕಾಶದಲ್ಲಿ ಚೈತನ್ಯ ಶಕ್ತಿ ತುಂಬಿರುವುದೆಂದು ಗ್ರಹಿಸಿಕೊಂಡು ಬ್ರಹ್ಮವನ್ನು ದಹರಾಕಾಶವೆಂದು ಉಪಾಸನೆ ಮಾಡುವವರಾಗಿರುತ್ತಾರೆ. ಹೀಗೆ ಶಿಷ್ಟರಾದ ಅನೇಕ ಸಾಧಕರು ನಾನಾರೀತಿ ಬ್ರಹ್ಮೋಪಾಸಕರಾಗಿ ಫಲಭಾಗಿಗಳಾಗಿದ್ದಾರೆಂಬುದೇನೋ ಸರಿ. ಆದರೆ, ಹೇ ಅನಂತ = ನಿರತಿಶಯ ಮಹಿಮಾಸ್ವರೂಪ ಪರಮೇಶ್ವರ, ತವ ಪರಮಂಧಾಮ = ನಿನ್ನ ಅತ್ಯಂತ ಶ್ರೇಷ್ಠವಾದ ದಿವ್ಯಜ್ಯೋತಿ ಸ್ವರೂಪವು. ತತಃ ಉದಗಾತ್ = ಆ ಉದರ, ಹೃದಯ, ದಹರಾಕಾಶಗಳನ್ನೂ ಮೀರಿರುವುದಾಗಿದೆ. ಶಕ್ತಿ ಸಂಚಾರದ ನಾಡೀ ಕ್ರಮಗಳಲ್ಲಿ ಮೂಲಾಧಾರ ಮೊದಲಾಗಿ ಕೊನೆಯದಾದ. ಶಿರಃ ಉದಗಾತ್ = ಸಹಸ್ರಾರವೆಂಬ ಶಿರಸ್ ಸ್ಥಾನವನ್ನೂ ಮೀರಿರುತ್ತದೆ. ಆ ಸ್ಥಾನವನ್ನು ಬ್ರಹ್ಮರಂಧ್ರವೆಂದೇ ಕರೆಯುತ್ತಾರೆ. ಯತ್ ಸಮೇತ್ಯ = ಆ ಬ್ರಹ್ಮರಂಧ್ರಗತಿಯನ್ನು ಯಾವ ಸಾಧಕರು ಯೋಗಸಾಧನೆಯಿಂದ ಸಾಧಿಸಿರುತ್ತಾರೆಯೋ, ಮತ್ತು ಯಾವ ತತ್ತ್ವಚಿಂತಕರು ನಿನ್ನ ಪರಂಧಾಮವನ್ನು ವಿಚಾರದಿಂದ ಅಪರೋಕ್ಷ ಮಾಡಿಕೊಂಡಿರುತ್ತಾರೆಯೋ ಅಂತಹ ಯೋಗಿಗಳು ಮತ್ತು ಸಿದ್ಧಪುರಷರು ಮಾತ್ರವೇ. ಇಹ ಕೃತಾಂತಮುಖೇ ಪುನಃ ನ ಪತಂತಿ = ಮೃತ್ಯುಮುಖದಂತಿರುವ ಈ ಸಂಸಾರ ಕೂಪದಲ್ಲಿ ಮತ್ತೆ ಬೀಳುವುದಿಲ್ಲ. ಹೀಗೆ ವೇದವು ಪರಮಾತ್ಮನ ಮಹಾಮಹಿಮೆಯನ್ನು ಸ್ತುತಿಸುತ್ತಾ ಸಾಧಕಜನರ ಶ್ರೇಯಃ ಪ್ರಾಪ್ತಿಗೆ ಉಪಾಸನೆ ಮತ್ತು ತತ್ತ್ವಜ್ಞಾನ ಎಂಬ ಎರಡುರೀತಿಯ ಸಾಧನೋಪಾಯಗಳನ್ನು ಉಪದೇಶಿಸಿದೆ. ಒಂದು ಕ್ರಮ ಮುಕ್ತಿ. ಮತ್ತೊಂದು ವಿಚಾರಪೂರ್ವಕವಾದ ತತ್ತ್ವಜ್ಞಾನ ಮಾಡಿಕೊಂಡರೆ ಸದ್ಯೋಮುಕ್ತಿ ಎಂದು ತಿಳಿಯುವುದು.

ಈಗ ಈ ವಿಚಾರ ಕ್ರಮವನ್ನೇ ವಿವರಿಸುತ್ತಾ ಸ್ತುತಿಸುವ ಶ್ಲೋಕವಿದು -

ಸ್ವಕೃತವಿಚಿತ್ರಯೋನಿಷು ವಿಶನ್ನಿವ ಹೇತುತಯಾ
ತರತಮತಶ್ಚಕಾಸ್ಸ್ಯನಲವತ್ ಸ್ವಕೃತಾನುಕೃತಿಃ ।
ಅಥ ವಿತಥಾಸ್ವಮೂಷ್ವವಿತಥಂ ತವ ಧಾಮ ಸಮಂ
ವಿರಜಧಿಯೋಽನ್ವಯಂತ್ಯಭಿವಿಪಣ್ಯವ ಏಕರಸಂ ॥ ೬ ॥

ಹೇ ಭಗವನ್, ತ್ವಂ ಅನಲವತ್ ಸ್ವಕೃತಾನುಕೃತಿಃ = ನೀನು ಬೆಂಕಿಯಂತೆ ಸ್ವಕೃತ ಕಾರ್ಯವಸ್ತುವನ್ನೇ ಅನುವರ್ತಿಸಿಕೊಂಡಿರುತ್ತೀಯೆ. ಅಂದರೆ ಕಾರ್ಯವಸ್ತುವಿನ

—ತಾದಾತ್ಮ್ಯಭಾವದಿಂದಲೇ ಇರುವವನೂ ತೋರುವವನೂ ಆಗಿದ್ದೀಯೆ. ಕಾರಣರೂಪದಲ್ಲೇ ಇದ್ದರೆ ಅವ್ಯಕ್ತಸ್ಥಿತಿಯೇ ಆಗಿರುವುದರಿಂದ ಜ್ಞಾನಕ್ಕೆ ವಿಷಯವೇ ಆಗುವುದಿಲ್ಲ. ಆಗ ಅವ್ಯಕ್ತನೇ ಆಗಿರುತ್ತೀಯೆ. ಆದ್ದರಿಂದ ತೋರಿಕೊಳ್ಳುವುದಕ್ಕೋ ಎಂಬಂತೆ. ಸ್ವಕೃತ ವಿಚಿತ್ರಯೋನಿಷು = ಸ್ವಸೃಷ್ಟವಾದ ಪ್ರಪಂಚದ ವಿವಿಧಜಾತಿ, ಬೇರೆ ಬೇರೆ ದ್ರವ್ಯಜಾತಿಗಳಲ್ಲಿ, ಹೇತುತಯಾ ವಿಶನ್ ಇವ = ಆಯಾಯಾ ದ್ರವ್ಯಜಾತಿಗಳಿಗೆ ಉಪಾದಾನ ಕಾರಣವಾಗಿ ಅವುಗಳಲ್ಲಿ ಪ್ರವೇಶ ಮಾಡಿರುವೆಯೋ ಎಂಬಂತೆ, ಚಕಾಸ್ಸಿ = ತೋರುತ್ತಿರುವೆ, ಮತ್ತು ತರತಮತಃ ಚಕಾಸ್ಸಿ = ತಾರತಮ್ಯಭಾವದಿಂದ ಪ್ರಕಾಶಿಸುವೆ. ಅಂದರೆ ಉಚ್ಚ ನೀಚ ಮಧ್ಯಮಭಾವಗಳಿಂದ ಕಾಣುತ್ತಿರುವೆ. ಇಲ್ಲಿ ಯೋನಿಶಬ್ದಕ್ಕೆ ಉಪಾಧಿ ಎಂಬ ಅರ್ಥವೂ ಇರುವುದರಿಂದ, ಬೇರೆ ಬೇರೆ ಉಪಾಧಿಗಳಲ್ಲಿ ಬೇರೆ ಬೇರೆಯಾಗಿ ವಿಚಿತ್ರವಾಗಿ ತೋರುತ್ತಿರುವೆ. ಹೇಗೆಂದರೆ - ಬೆಂಕಿಯು ತೋರಿಕೊಳ್ಳುವುದಕ್ಕೆ ಕಾಷ್ಠವು ಉಪಾಧಿಯಾಗಿರುತ್ತದೆ. ಉಪಾಧಿ ಇಲ್ಲದೇ ತೋರುವುದಿಲ್ಲ. ಆ ಕಾಷ್ಠದ ಉತ್ಪತ್ತಿಗೆ ಮತ್ತು ಸ್ಥಿತಿಗೆ ತೇಜೋರೂಪದ ಬೆಂಕಿಯೇ ಕಾರಣವಾಗಿರುತ್ತದೆ. ತೇಜಃ ಪದಾರ್ಥವಿಲ್ಲದೇ ಕಾರ್ಯರೂಪದ ಕಾಷ್ಠಕ್ಕೆ ಉತ್ಪತ್ತಿಸ್ಥಿತಿಗಳೇ ಉಂಟಾಗಲಾರವು. ಇಂತು ತೇಜೋರೂಪದ ಬೆಂಕಿಯು ಸ್ವಶಕ್ತಿಯಿಂದ ಕಾಷ್ಠಕಾರ್ಯವನ್ನುಂಟುಮಾಡಿ ಆ ಕಾಷ್ಠದ ವಿವಿಧ ಆಕಾರಗಳಲ್ಲಿ ಬೆಂಕಿಯು ಹತ್ತಿಕೊಂಡು ಪ್ರಕಾಶಿಸುವುದು. ಆಗ ಆಯಾಯಾ ಕಾಷ್ಠದ ಆಕಾರವುಳ್ಳದ್ದಾಗಿಯೇ ತೋರಿಕೊಳ್ಳುವುದು. ಹಾಗೆಯೇ ಪರಮಾತ್ಮನು ಈ ಪ್ರಪಂಚಸೃಷ್ಟಿಗೆ - ಜಗತ್ಕಾರ್ಯಕ್ಕೆ ಅಧಿಷ್ಠಾನವೂ, ಉಪಾದಾನಕಾರಣವೂ ಆಗಿರುವುದರಿಂದ ಮತ್ಸ್ಯಕೂರ್ಮಾದಿ ಅವತಾರ ದೇಹಗಳಲ್ಲಿ, ದೇವಪಿತೃಮನುಷ್ಯಾದಿ ಜಾತಿಗಳಲ್ಲಿ, ವಿರಾಟ್ ಪಂಚಭೂತಗಳಲ್ಲಿ ಮತ್ತು ಚರಾಚರಭೂತಗಳಲ್ಲಿಯೂ ಉಪಾದಾನ ಕಾರಣವಾಗಿ ಪ್ರವೇಶಿಸಿದ್ದು, ಆಯಾಯಾ ಉಪಾಧಿಗಳಲ್ಲಿ ಚಿತ್ರವಿಚಿತ್ರವಾಗಿಯೂ, ತರತಮಭಾವದಿಂದಲೂ ತೋರುತ್ತಿರುವನು. ಹೀಗೆ ಹೇಳಿದುದು ಹೇಗೆ ಪರಮಾತ್ಮನಿಗೆ ಅನ್ವಯಿಸಿಕೊಂಡಿರುವುದೋ ಹಾಗೆಯೇ ಜೀವಾತ್ಮರಿಗೂ ಅನ್ವಯಿಸಿಕೊಂಡಿರುವುದು. ಆಕಾಶದಂತೆ ಆತ್ಮನು ಅಖಂಡಾದ್ವಿತೀಯನಾಗಿರುತ್ತಾನಲ್ಲವೇ ! ಜೀವರು ಸ್ವಕೃತ ಧರ್ಮಕರ್ಮನಿಮಿತ್ತದಿಂದ ವಿವಿಧ ದೇಹಗಳನ್ನು ನಿರ್ಮಿಸಿಕೊಂಡು ಆ ಉಪಾಧಿಗಳಲ್ಲಿ ತಾವೇ ಪ್ರವೇಶಿಸಿ, ಉಚ್ಚ

—— ನೀಚ ಮಧ್ಯಮ ಭಾವಗಳಿಂದ ತೋರುತ್ತಿರುವರು. ಸಮಷ್ಟಿ ಉಪಾಧಿಯಿಂದ ಮತ್ತು ವ್ಯಷ್ಟಿ ಉಪಾಧಿಯಿಂದ ಪರಮಾತ್ಮಾ ಜೀವಾತ್ಮಾ ಎಂಬ ಭೇದವೂ ತೋರುವುದು. ಅಂತು ಈ ರೀತಿ ಕಾರ್ಯದಲ್ಲಿ ಆತ್ಮನ ಪ್ರವೇಶವೆಂದರೆ ಮುಖ್ಯಾರ್ಥದಲ್ಲಿ ಅಲ್ಲ. ಘಟ ಮಠಗಳಲ್ಲಿ ಆಕಾಶಹೊಕ್ಕಂತೆ, ಪ್ರವೇಶ ಎಂದು ತಿಳಿಯಬೇಕು. ಏಕೆಂದರೆ ಆಕಾಶದಂತೆ ಆತ್ಮನು ಸರ್ವದಾ ಸರ್ವತ್ರ ಪೂರ್ಣನೇ ಆಗಿರುವುದರಿಂದ ಹೊಸದಾಗಿ ಪ್ರವೇಶ ಎನ್ನುವುದು ಸಮಂಜಸವಾಗುವುದಿಲ್ಲ. ಮತ್ತು ಏಕಾತ್ಮನೇ ಸರ್ವಕಾರ್ಯ ವಿಕಾರಗಳಿಗೂ ಉಪಾದಾನಕಾರಣ ಮತ್ತು ಅಧಿಷ್ಠಾನವಾಗಿರುವುರಿಂದ ಹಾಗೂ ಕಾರ್ಯಗಳೆಲ್ಲವೂ ಮಾಯಿಕವಾಗಿರುವುರಿಂದಲೂ ಶುಕ್ತಿರಜತ ಎಂಬ ಕಾರ್ಯಸ್ಥಳದಲ್ಲಿ ಚಿಪ್ಪು ಹೇಗೆ ಬೆಳ್ಳಿಯಲ್ಲಿ ಹೊಕ್ಕಿರುವುದೋ ಹಾಗೆಯೇ ಸಕಲ ಕಾರ್ಯಗಳಲ್ಲಿ ಬ್ರಹ್ಮಾತ್ಮನು ಹೊಕ್ಕಿರುತ್ತಾನೆಂದು ತಿಳಿಯಬೇಕು.

ಇಲ್ಲಿ ಈ ರೀತಿ ವಿಚಾರ ಕ್ರಮದಿಂದ ತಿಳಿಯುವುದೇನೆಂದರೆ - ಕಾರ್ಯಕಾರಣ ಭಾವವಿರುವ ಕಡೆಯಲ್ಲೆಲ್ಲಾ ಕಾರಣ ವಸ್ತುವು ನಿಜವಾಗಿರುವುದು. ಕಾರ್ಯವಸ್ತುವು ವಿಕಲ್ಪ ಮಾತ್ರವೇ, ವಿಕಾರವೇ. ಮತ್ತು ಅದು ಮಿಥ್ಯಾರೋಪಿತವೇ ಆಗಿರುತ್ತೆಂದು ನಿರ್ಣಯವಾಗುವುದು. ಇದು ವಿಚಾರದಿಂದಲೇ ತಿಳಿದುಬರುವಂತಹ ವಿಷಯವಾಗಿದೆ. ಅಥ ಅತಃ = ಇಲ್ಲಿ ವಿಷಯ ಹೀಗಿರುವುದರಿಂದ, ವಿತಥಾಸು ಅಮೂಷು = ಮಿಥ್ಯಾರೂಪದ, ಆಗಮಾಪಾಯಿಗಳಾದ ಈ ಚರಾಚರ ಜಗತ್ತಿನಲ್ಲಿ ದೇಹದಲ್ಲಿ ತವಧಾಮ = ಸರ್ವಾಧಿಷ್ಠಾನವಾದ ನಿನ್ನ ನಿಜಸ್ಥಿತಿಯು = ತೇಜಃ ಪ್ರಕಾಶವು = ಅಂದರೆ ಸತ್ತಾ ಸ್ಫೂರ್ತಿಯು = ಇರುವಿಕೆ ಮತ್ತು ತೋರುವಿಕೆ, ಇದೇ. ಅವಿತಥಂ = ಸತ್ಯವಾಗಿದೆ. ಮಿಥ್ಯಾಕಾರ್ಯರೂಪದ ದೇಹೇಂದ್ರಿಯಾದಿ ಜಗನ್ನಾಮರೂಪಗಳು ಬಾಧೆಗೆ ವಿಷಯಗಳಾಗಿರುತ್ತವೆ. ಕಾರಣಾಧಿಷ್ಠಾನವಾದ ಆತ್ಮನು ಬಾಧೆಗೆ ವಿಷಯನಾಗದೇ ಇರುವುದರಿಂದ ಅಂತಹ ಆತ್ಮಸ್ವರೂಪವು. ಸಮಂ = ಸರ್ವತ್ರ ಸರ್ವದಾ ಸಮವಾಗಿರುವಂತಹದು. ಅಂದರೆ ಸದಾ ನಿರ್ವಿಶೇಷ ಸ್ವರೂಪವಾಗಿರುತ್ತದೆ ಮತ್ತು ಏಕರಸಂ = ಹೇ ಭಗವನ್ ನಿನ್ನ ಪರಂಧಾಮವು ಅಖಂಡ ಸಚ್ಚಿದಾನಂದ ಮಾತ್ರವಾಗಿದೆ. ಅಂತಹ ಪರಮಾರ್ಥವನ್ನು ವಿರಜಧಿಯಃ = ನಿರ್ಮಲಮತಿಗಳಾದ ಮತ್ತು ಅಭಿವಿಪಣ್ಯವಃ = ಈ ಬಾಹ್ಯದ ಸಕಲ ವ್ಯವಹಾರಗಳಲ್ಲಿ ಆಸಕ್ತಿ ಇಲ್ಲದೇ ವಿರಕ್ತರಾದ ಯೋಗಿಗಳು ಮಹಾಭಕ್ತರು ಮತ್ತು ಶ್ರುತಿಗಳು. ಅನ್ವಯಂತಿ = ವಿಚಾರಪೂರ್ವಕವಾಗಿ

೩೪ದು ನಿಶ್ಚಯಮಾಡಿಕೊಂಡವರಾಗಿರುತ್ತಾರೆ. ಅಪರೋಕ್ಷವಾಗಿ ಕಂಡುಕೊಂಡಿರುತ್ತಾರೆ.

ಮತ್ತೆ ಈ ವಿಚಾರ ಕ್ರಮವನ್ನೇ ವಿವರಿಸುತ್ತಾ ಸ್ತುತಿಸುವುದೇನೆಂದರೆ -

ಸ್ವಕೃತಪುರೇಷ್ವಮೀಷ್ವಬಹಿರಂತರಸಂವರಣಂ
ತವ ಪುರುಷಂ ವದಂತ್ಯಖಿಲಶಕ್ತಿಧೃತೋಽಂಶಕೃತಂ ।
ಇತಿ ನೃಗತಿಂ ವಿವಿಚ್ಯ ಕವಯೋ ನಿಗಮಾವಪನಂ
ಭವತ ಉಪಾಸತೇಽಂಘ್ರಿಮಭವಂ ಭುವಿ ವಿಶ್ವಸಿತಾಃ ॥ ೭ ॥

ಹೇ ಭಗವನ್, ಅಮೀಷು ಸ್ವಕೃತಪುರೇಷು = ತನ್ನ ಕೃತಕರ್ಮಫಲವಾಗಿ ನಿರ್ಮಿಸಿ, ಪಡೆದುಕೊಂಡ ದೇಹಗಳಲ್ಲಿ (ಬಹುಜನ್ಮಾಭಿಪ್ರಾಯದಿಂದ ಬಹುವಚನ ಹೇಳಿದೆ) ಇದ್ದುಕೊಂಡು ಕರ್ಮಕರ್ತೃವಾಗಿಯೂ ಫಲಭೋಕ್ತೃವಾಗಿಯೂ ಕಂಡುಬರುತ್ತಿರುವ. ಪುರುಷಂ = ಜೀವಾತ್ಮನನ್ನು. ಅಖಿಲಶಕ್ತಿಧೃತಃ ತವ ಅಂಶಕೃತಂ ವದಂತಿ = ಸಮಸ್ತ ಶಕ್ತಿಗಳುಳ್ಳ ನಿನ್ನ ಅಂಶ ಎಂಬಂತೆ, ಮಾಡಲ್ಪಟ್ಟಿರುವಂತೆ ಹೇಳುತ್ತಾರೆ. ಹೀಗೆ ಹೇಳಿಯೂ ಮತ್ತೆ. ಅಬಹಿರಂತಃ ಅಸಂವರಣಂ ವದಂತಿ ಕವಯಃ = ಹೊರಗಿನ ಕಾರ್ಯ ದೇಹೋಪಾಧಿಯಿಂದಾಗಲೀ, ಒಳಗಿನ ಅವಿದ್ಯಾಮಾಯಾ ಕಾರಣೋಪಾಧಿಯಿಂದಾಗಲೀ ಸಂವೃತನಾಗಿಲ್ಲ (ಆವರಣವುಳ್ಳವನಾಗಿಲ್ಲ) ಎಂದು ಜ್ಞಾನಿಗಳು ಹೇಳುತ್ತಾರೆ. ವಾಸ್ತವದಲ್ಲಿ ಆತ್ಮನು ಅಸಂಗ ಅದ್ವಿತೀಯನಾಗಿರುವುದರಿಂದ ಸದಾ ಶುದ್ಧ ಬುದ್ಧ ಮುಕ್ತನೇ ಎಂದು ಕವಿಗಳು ಅಂದರೆ ತತ್ವಜ್ಞಾನಿಗಳು ಹೇಳುವರು. ಇತಿ ನೃಗತಿಂ ವಿವಿಚ್ಯ = ಹೀಗೆ ಜೀವಪುರುಷನ ಯಥಾರ್ಥ ಸ್ವರೂಪವನ್ನು ವಿವೇಚನೆ ಮಾಡಿರುವ ಕವಿಗಳು ವಿವೇಕಿಗಳು. ಭುವಿ = ಭೂಲೋಕದಲ್ಲಿ ದೇಹಪ್ರಾಪ್ತಿಯಾಗಿರುವಾಗ, ಅಭವಂ ಭವತಃ ಅಂಘ್ರಿಂ = ಸಂಸಾರಹೀನವೂ ಸಂಸಾರನಿವರ್ತಕವೂ ಆದ ನಿನ್ನ ಪಾದಕಮಲವನ್ನು, ನಿಗಮಾವಪನಂ = ಶ್ರೇಷ್ಠ ಫಲಪ್ರಾಪ್ತಿಗೆ ಬೀಜ ಬಿತ್ತಲು ಪ್ರಶಸ್ತ ಕ್ಷೇತ್ರವೆಂದು ನಂಬಿ. ವಿಶ್ವಸಿತಾಃ = ದೃಢವಿಶ್ವಾಸ ಭರವಸೆಯುಳ್ಳವರಾಗಿ. ಉಪಾಸತೇ = ಸೇವಿಸುತ್ತಾ ಆರಾಧಿಸುತ್ತಾರೆ. ಅರ್ಚನ ವಂದನ ಧ್ಯಾನಾದಿಗಳಿಂದ ಸೇವಿಸುತ್ತಾರೆ ಮತ್ತು ಭಕ್ತಿಪೂರ್ವಕವಾಗಿ ಶ್ರವಣ ಮನನ ನಿದಿಧ್ಯಾಸನ ಕ್ರಮಗಳಿಂದ ಭಜಿಸುತ್ತಾರೆ.

ಈಶ್ವರನ ಅನಂತ ಶಕ್ತಿಗಳಲ್ಲಿ ಕೆಲವು ಶಕ್ತಿಗಳು ಜೀವಪುರುಷನಲ್ಲಿ

ಕಂಡುಬರುವುದರಿಂದ ಜೀವನನ್ನು ಈಶ್ವರಾಂಶ ಎನ್ನುತ್ತಾರೆ. ನಿರವಯವ ಏಕಾತ್ಮನಲ್ಲಿ ಅಂಶ ಎಂಬುದು ಸಂಭವಿಸುವುದಿಲ್ಲ ಮತ್ತು ಜೀವಾತ್ಮನು ಹೊಸದಾಗಿ ಹುಟ್ಟುವುದೂ ಇಲ್ಲ( ಹುಟ್ಟುವುದು ದೇಹ ಮಾತ್ರವೇ) ಲೋಕ ವ್ಯವಹಾರ ಮಾಡುವಾಗ ಜೀವರು ದೇಹ ಸಂಬಂಧವುಳ್ಳವರೆಂದೂ ಕರ್ತೃಭೋಕ್ತೃಗಳೆಂದೂ ಪಾಪಲೇಶವುಳ್ಳವರೆಂದೂ ತೋರುವಂತೆ ಈಶ್ವರನು ಅವತಾರವೆತ್ತಿದಾಗ ಅವನಿಗೂ ಕರ್ಮಲೇಪವುಂಟೋ ಎಂಬ ಆಕ್ಷೇಪಕ್ಕೆ ಹಿಂದಿನ ಶ್ಲೋಕಗಳಲ್ಲಿ ಅವಿಕೃತಾತ್ ತತ ಉದಗಾತ್, ಅವಿತಥಂ, ಸಮಂ ಎಂಬ ಮಾತುಗಳಿಂದ ಈಶ್ವರನಿಗೆ ಕರ್ಮಲೇಪವಿಲ್ಲೆಂದು ತೋರಿಸಿ ಸಮರ್ಥಿಸಲಾಗಿದೆ. ಈ ಶ್ಲೋಕದಲ್ಲಿ ವ್ಯಾವಹಾರಿಕವಾಗಿ ಜೀವನು ಸಂಸಾರಿಯಂತೆ ಕಂಡರೂ ವಾಸ್ತವದಲ್ಲಿ ಸಂಸಾರಿಯಲ್ಲ ಎಂಬುದನ್ನು ಅಬಹಿರಂತರಸಂವರಣಂ ಎಂಬ ಮಾತಿನಿಂದ ಸಮರ್ಥಿಲಾಗಿದೆ. ಈ ನಿರೂಪಣೆಯಿಂದ ಜೀವಸ್ವರೂಪವೇ ಸಂಸಾರಿಯಲ್ಲ ಎಂದಾಗ ಈಶ್ವರನು ಸಂಸಾರಿಯಾಗಿರುವುದಿಲ್ಲವೆಂದು ಬೇರೆ ಹೇಳಬೇಕೆ ? ಈ ಸ್ತೋತ್ರಶ್ಲೋಕದ ಸಾರವೇನೆಂದರೆ - ಭಗವಂತನು ಸೇವ್ಯನಾಗಿದ್ದಾನೆ. ಜೀವಪುರುಷನು ಸೇವಕನಾಗಿರುತ್ತಾನೆ. ಹೀಗೆ ಜೀವಪುರುಷನು ಪ್ರಪತ್ತಿಪೂರ್ವಕವಾಗಿ ತತ್ವಪ್ರತಿಪತ್ತಿ ಮಾಡಿಕೊಳ್ಳಬೇಕು ಎಂದು ಬೋಧವಾಗುವುದು ಮತ್ತು ಏಕಾತ್ಮವಾದವು ಋಷಿಸಂಮತ. ಬ್ರಹ್ಮಾತ್ಮೈಕ್ಯವೇ ಪರಮಾರ್ಥ ಎಂಬುದೂ ತಿಳಿಯುವುದು.

ಈಗ ತತ್ತ್ವಪ್ರತಿಪತ್ತಿಗೆ ಭಗವತ್ ಪ್ರಪತ್ತಿಯು ಅತ್ಯಾವಶ್ಯಕ. ಭಕ್ತಿಯು ಭಗವತ್ತತ್ತ್ವ ಜ್ಞಾನಕ್ಕೆ ಮುಖ್ಯ ಸಾಧನ ಎಂಬುದನ್ನು ಶಿಷ್ಟಾಚಾರ ಸಂಪ್ರದಾಯಗಳನ್ನು ತಿಳಿಸುತ್ತಾ ಸ್ತುತಿಸುತ್ತಾರೆ -

ದುರವಗಮಾತ್ಮತತ್ತ್ವನಿಗಮಾಯ ತವಾತ್ತತನೋಃ
ಚರಿತಮಹಾಮೃತಾಬ್ಧಿಪರಿವರ್ತಪರಿಶ್ರಮಣಾಃ ।
ನ ಪರಿಲಷಂತಿ ಕೇಚಿದಪವರ್ಗಮಪೀಶ್ವರ ತೇ
ಚರಣಸರೋಜಹಂಸಕುಲಸಂಗವಿಸೃಷ್ಟಕುಲಾಃ ॥ ೮ ॥

ಹೇ ಈಶ್ವರ = ಎಲೈ ಭಗವಂತನೇ, ದುರವಗಮಾತ್ಮತತ್ತ್ವನಿಗಮಾಯ =

ಬಹುಸೂಕ್ಷ್ಮ ವಿಷಯವಾದ್ದರಿಂದಲೇ ರಹಸ್ಯವಾದ ಆತ್ಮತತ್ತ್ವಜ್ಞಾನವು ದುರ್ಗಮವಾಗಿರುತ್ತದೆ. ಅಂತಹ ದುರ್ಜ್ಞೇಯ ಪರಮಾತ್ಮನನ್ನು ಜೀವರು ಅರಿತುಕೊಂಡು ಕೃತಾರ್ಥರಾಗಲೆಂದೇ ಕರುಣೆಯಿಂದ ಜ್ಞಾನೋಪದೇಶ ಮಾಡಲು, ಆತ್ತತನೋಃ = ಅನಂತ ಕಲ್ಯಾಣಗುಣ ಪರಿಪೂರ್ಣವಾದ ರಾಮಕೃಷ್ಣಾದ್ಯವತಾರಗಳನ್ನೂ ಮತ್ತು ಅಚಿಂತ್ಯರಚನಾಕ್ರಮದ ಜಗದ್ರೂಪವನ್ನೂ ಧರಿಸುವ, ತವ ಚರಿತಮಹಾಮೃತಾಬ್ಧಿಪರಿವರ್ತಪರಿಶ್ರಮಣಾಃ = ನಿನ್ನ ಅವತಾರ ಕಥೆ ಮತ್ತು ಜಗನ್ನಿರ್ಮಾಣ ಕಥೆ ಎಂಬ ಮಹಾಮೃತ ಸಮುದ್ರದಲ್ಲಿ ಮಿಂದು, ಆ ಅಭಿಷೇಕದಿಂದ ಸಂಸಾರ ತಾಪಗಳನ್ನು ಪರಿಹರಿಸಿಕೊಂಡು ಶೀತಲಾನಂದವನ್ನು ಪಡೆದವರಾದ, ಕೇಚಿತ್ = ಮಹಾತ್ಮರಾದ ಕೆಲವರು ಮಾತ್ರ. ತೇ ಚರಣಸರೋಜಹಂಸಕುಲಸಂಗವಿಸೃಷ್ಟಕುಲಾಃ = ನಿನ್ನ ಪಾದಕಮಲ ಸೇವಿಗಳಾದ ಹಂಸಪಕ್ಷಿಯಂತಹ ಪರಮಹಂಸಯತಿಗಳ ಮತ್ತು ಭಕ್ತಯೋಗಿಗಳ ಸಂಗವನ್ನೇ ಬಯಸಿ ತಮ್ಮ ಜ್ಞಾತಿಕುಲ ಬಂಧು, ಬಾಂಧವರನ್ನು ತ್ಯಜಿಸಿರುವವರಾಗಿದ್ದು, ತೇ ಅಪವರ್ಗಮಪಿ = ನೀನು ಅನುಗ್ರಹಿಸಿ ಕೊಡುವ ಮೋಕ್ಷವನ್ನೂ ಕೂಡ, ನ ಪರಿಲಷಂತಿ = ಸ್ವೀಕರಿಸಲು ಇಚ್ಛಿಸುವುದಿಲ್ಲ, ಒಪ್ಪಿಕೊಳ್ಳುವುದಿಲ್ಲ. ಇಲ್ಲಿ ಮರ್ಮವೇನೆಂದರೆ ಮೋಕ್ಷದಲ್ಲಿ ದೇಹೇಂದ್ರಿಯಾದಿಗಳು ಇರುವುದಿಲ್ಲ, ಭಕ್ತರಿಗೆ ಭಗವತ್‌ಕಥಾ ಶ್ರವಣಕ್ಕೆ ಚ್ಯುತಿಯಾಗುವುದು. ಅದು ನಷ್ಟವೇ ಎಂದು ಆ ಏಕಾಂತ ಭಕ್ತರ ಇಂಗಿತವಾಗಿದೆ. ಆದ್ದರಿಂದ ಭಗವದ್ರತಿಯೇ, ಪ್ರಪತ್ತಿಪ್ರಸ್ಥಾನವೇ ಹೆಚ್ಚಿನ ಶ್ರೇಯಸ್ಕರ ಎಂದು ಜೀವರನ್ನು ಉದ್ದೇಶಿಸಿ ಬೋಧಿಸಲಾಗಿದೆ.

ಈಗ ಭಕ್ತರ ಸುಯೋಗವನ್ನು ಅಭಕ್ತರ ದೌರ್ಭಾಗ್ಯವನ್ನು ತೋರಿಸುತ್ತಾ ಸ್ತುತಿಸುತ್ತಾರೆ -

ತ್ವದನುಪಥಂ ಕುಲಾಯಮಿದಮಾತ್ಮಸುಹೃತ್ ಪ್ರಿಯವತ್
ಚರತಿ ತಥೋನ್ಮುಖೇ ತ್ವಯಿ ಹಿತೇ ಪ್ರಿಯ ಆತ್ಮನಿ ಚ ।
ನ ಬತ ರಮಂತ್ಯಹೋ ಅಸದುಪಾಸನಯಾऽऽತ್ಮಹನೋ
ಯದನುಶಯಾ ಭ್ರಮಂತ್ಯುರುಭಯೇ ಕುಶರೀರಭೃತಃ ॥ ೯ ॥

ಕುಲಾಯಂ ಇದಂ = ಮನುಷ್ಯನಿಗೆ ವಾಸಸ್ಥಾನ ಗೂಡಿನಂತಿರುವ ಈ ದೇಹ

ಎಂಬುದು. ಆತ್ಮಸುಹೃತ್‌ಪ್ರಿಯವತ್ = ಆತ್ಮ ಮಿತ್ರನಂತೆಯೂ ಬಹು ಪ್ರಿಯವೂ ಆಗಿರುವುದು. ಹೀಗೆ ಲೋಕದಲ್ಲಿ ಕಂಡುಬರುವುದಷ್ಟೇ! ತಥಾ ಚ = ಆ ದೇಹದಂತೆಯೇ ಅಥವಾ ಇನ್ನೂ ಅತಿಶಯವಾಗಿಯೇ ನೀನು ಭಗವಂತನು ಪ್ರಿಯತಮನಾಗಿರುವೆ. ಏಕೆಂದರೆ - ಉನ್ಮುಖೇ ಪ್ರಿಯೇ ಹಿತೇ ಆತ್ಮನಿ ತ್ವಯಿ = ಈ ಶರೀರ ವರ್ಗದ ಯೋಗ ಕ್ಷೇಮವನ್ನು ನಿರ್ವಹಿಸುತ್ತಾ ಪಾಲಿಸುವ, ಪ್ರಿಯತಮನೂ ಹಿತೈಷಿಯೂ ಹಾಗೂ ಸಾಕ್ಷಾತ್ ಆತ್ಮನೇ ಆಗಿರತಕ್ಕ ನಿನ್ನಲ್ಲಿ, ಚರತಿಯದಿ = (ಶರೀರ ವರ್ಗವು) ಪ್ರವರ್ತಿಸಿಕೊಂಡಿದ್ದರೆ, ಆಗ ಅದು, ತ್ವದನುಪಥಂ = ನಿನ್ನನ್ನು ಹೊಂದುವ ಮಾರ್ಗದಲ್ಲಿದೆ ಎನ್ನಬಹುದು. ಆಗ ದೇಹವು ಸ್ವಾಧೀನದಲ್ಲಿದೆ ಎಂದಾಗುವುದು ಮತ್ತು ಹಾಗಿದ್ದರೇನೇ ದೇಹವು ನಿಜವಾಗಿ ಆತ್ಮಸುಹೃತ್ ಪ್ರಿಯವತ್ ಎಂಬ ಮಾತು ಸಾರ್ಥಕವಾಗುವುದು. ಅಂದರೆ ಮನುಷ್ಯನು ಕಾಯೇನವಾಚಾ ಮನಸಾ ಭಗವದ್ಭಕ್ತಿ ಉಪಾಸನೆ ಮಾಡುತ್ತಿದ್ದರೆ ಆಗಲೇ ಆ ದೇಹಿಯು ಸುಪುರುಷ ಎಂದಾಗುವನು. ಇಲ್ಲಿ ನೀನೇ ಆತ್ಮನು ಎಂದು ಹೇಳಿರುವುದರಿಂದ ಪರಮಾತ್ಮನ ಆರಾಧನೆಯು ಬಹು ಸುಲಭ. ತನಗೆ ಅತ್ಯಂತ ಸಮೀಪದಲ್ಲಿರುವುದರಿಂದ ಸ್ವಲ್ಪವೂ ಆಯಾಸಪಡಬೇಕಾಗಿಲ್ಲ ಎಂದೂ ತಿಳಿಯುವುದು. ಮನುಷ್ಯನು ಭಗವದ್ಭಕ್ತನಾದರೆ ಆಗಲೇ ದೇಹವು ನಿಜವಾಗಿ ಆತ್ಮಸುಹೃತ್‌ಪ್ರಿಯವತ್ ಚರತಿ = ಆಪ್ತಮಿತ್ರ, ಬಹುಪ್ರಿಯ ಆಗಿ ವರ್ತಿಸಿಕೊಂಡಿರುವುದಾಗುವುದು. ಅಂದಾಗ ದೇಹದ ಮೇಲೆ ಸ್ವಾಭಾವಿಕವಾಗಿರುವ ಪ್ರೀತಿಯು ಭಗವದ್ಭಕ್ತಿಯಿಂದ ಕೂಡಿದ್ದಾದಾಗಲೇ ದೇಹವು ಪ್ರಶಸ್ತವೆಂದಾಗುವುದು. ಆದರೆ ಲೋಕದ ಜನರು ತಮ್ಮಲ್ಲೇ ಇರುವ ಸುಲಭ ಸೇವ್ಯನಾದ, ತ್ವಯಿ ನ ರಮಂತಿ = ನಿನ್ನಲ್ಲಿ ಅನುರಕ್ತರಾಗಿರುವುದಿಲ್ಲವಲ್ಲ! ಅಹೋಬತ = ಅಯ್ಯೋ ವಿಷಾದ! ಯದನುಶಯಾಃ = ದೇಹಾನುವರ್ತಿಗಳಾದ ಜೀವಪುರುಷರು. ಅಸದುಪಾಸನಯಾ = ಅನರ್ಥಕಾರಿಗಳಾದ ದೇಹೇಂದ್ರಿಯಗಳ ಪೋಷಣೆ ಪಾಲನೆಯ ಲಾಲಸೆಯಿಂದ, ಆತ್ಮಹನಃ = ಆತ್ಮದ್ರೋಹಿಗಳಾಗಿ ಆತ್ಮಹತ್ಯಾ ಮಹಾಪಾಪವನ್ನೇ ಮಾಡುತ್ತಿರುವರು, ಕುಶರೀರಭೃತಃ = ಹೀನಜನ್ಮ ಪಡೆದ ಅವರು ದುರ್ದೇಹಧಾರಿಗಳು. ಉರುಭಯೇ = ಮೇಲಿಂದಮೇಲೆ ಭಯಗಳನ್ನೊಡ್ಡುವ ಸಂಸಾರ ಗಹ್ವರದಲ್ಲಿ ಭ್ರಮಂತಿ = ಭ್ರಮಿಸಿಕೊಂಡಿರುತ್ತಾರೆ. ಭ್ರಾಂತಿಪೀಡಿತರೇ ಆಗಿರುತ್ತಾರೆ. ಭಗವದ್ಭಕ್ತರು ಯಾವ ಆಪತ್ತಿಗೂ ಸಿಲುಕದೇ ಪರಮಪುರುಷಾರ್ಥ ಸಾಧನೆ ಮಾಡಿಕೊಳ್ಳುವರು. ಆದ್ದರಿಂದ ಭಕ್ತಿಯು ಸುಲಭೋಪಾಯ

ಎಂದು ತಿಳಿಯುವುದು. ಹೀಗೆಂದು ಮುಮುಕ್ಷು ಜನರಿಗೆ ಭಕ್ತಿಯೇ ಮುಖ್ಯ ಸಾಧನ ಎಂದು ಸಮರ್ಥಿತವಾಗಿದೆ.

ಇನ್ನು ಈಗ ಯಾವ ಭಾವದಿಂದಲಾದರೂ ಸರಿಯೆ ಮನುಷ್ಯನ ಮನೋಗತಿಯು ಅಂದರೆ ಸ್ಮರಣರೂಪ ವೃತ್ತಿಯು ಭಗವದಭಿಮುಖವಾಗಿದ್ದರೆ ಶ್ರೇಯಃ ಪ್ರಾಪ್ತಿಯು ನಿಶ್ಚಿತವೆಂಬುದನ್ನು ತೋರಿಸುತ್ತಾ ಸ್ತುತಿಸುವ ಶ್ಲೋಕ =

ನಿಭೃತಮರುನ್ಮನೋಽಕ್ಷದೃಢಯೋಗಯುಜೋ ಹೃದಿ ಯತ್
ಮುನಯ ಉಪಾಸತೇ ತದರಯೋಽಪಿ ಯಯುಃ ಸ್ಮರಣಾತ್ ।
ಸ್ತ್ರಿಯ ಉರಗೇಂದ್ರಭೋಗಭುಜದಂಡವಿಷಕ್ತಧಿಯೋ
ವಯಮಪಿ ತೇ ಸಮಾಃ ಸಮದೃಶೋಽಂಘ್ರಿಸರೋಜಸುಧಾಃ ॥ ೧೦ ॥

ಹೇ ಪರಮೇಶ್ವರ, ನಿನ್ನ ಸ್ಮರಣೆಯ ಮಹಿಮೆಯನ್ನು ಏನೆಂದು ಕೊಂಡಾಡೋಣ! ಮುನಿಗಳು, ಶತ್ರುಗಳು, ಗೋಪಿಕಾಸ್ತ್ರೀಯರು ಮತ್ತು ನಾವು ಶ್ರುತಿಗಳು ಹೀಗೆ ನಾನಾ ತರದ ಜನಗಳು ನಿನ್ನನ್ನು ಸ್ಮರಿಸಿಕೊಳ್ಳುವವರಾಗಿದ್ದರೂ ಫಲವು ಏಕಪ್ರಕಾರವಾಗಿರುವುದು. ಮುನಯಃ = ಯೋಗಿಗಳು, ಹೃದಿ = ತಮ್ಮ ಹೃದಯ ಮಧ್ಯದಲ್ಲಿ, ನಿಭೃತಮರುನ್ಮನೋಽಕ್ಷದೃಢಯೋಗಯುಜಃ = ಪ್ರಾಣವಾಯು ಬುದ್ಧಿ ಮನಸ್ಸು ಮತ್ತು ಇಂದ್ರಿಯಗಳನ್ನು ಯೋಗಾಭ್ಯಾಸದಿಂದ ವಶಪಡಿಸಿಕೊಂಡು ಜಿತೇಂದ್ರಿಯರಾಗಿ, ಯತ್ - ಯಾವ ಉದ್ದೇಶದಿಂದ ಅಂದರೆ ಪರಂಧಾಮವನ್ನು ಪಡೆಯಲು, ಉಪಾಸತೇ = ಮಹಾ ಉಪಾಸನೆಯಿಂದ ನಿನ್ನನ್ನು ಸ್ಮರಿಸಿಕೊಂಡಿರುತ್ತಾರೆಯೋ, ತತ್ = ಆ ಪರಂಧಾಮವನ್ನು, ಅರಯಃ ಅಪಿ = ಮಹಾ ಕ್ರೋಧದ್ವೇಷಪರರಾದ (ಅಜಿತೇಂದ್ರಿಯರಾದ) ದೈತ್ಯಾಸುರ ಶತ್ರುಗಳೂ ಕೂಡ, ಸ್ಮರಣಾತ್ = ನಿನ್ನನ್ನು ನೆನೆಯುತ್ತಲೇ ಅಂದರೆ ದ್ವೇಷದಿಂದ ನಿನ್ನೊಡನೆ ಕಾದಾಡಿ ಕೊನೆಯಲ್ಲಿ (ಅದೇ ಸದ್ಗತಿಯನ್ನು), ಯಯುಃ = ಪಡೆದವರಾದರು, ಇದು ಆಶ್ಚರ್ಯವಲ್ಲವೇ ! ಸದ್ಭಾವನೆ ದುರ್ಭಾವನೆಗಳು ಪರಸ್ಪರ ವಿರುದ್ಧವಾಗಿದ್ದರೂ ಫಲದಲ್ಲಿ ಸಮಾನವೇ ಆಗುವುದು ! ಮತ್ತೆ ಹೀಗೆಯೇ, ವಯಂ = ನಾವು ಶ್ರುತಿಗಳು (ಉಪಾಸ್ಮಹೇ) ನಿನ್ನನ್ನು ಸ್ತುತಿಸುವ ನಾವು ಲಕ್ಷಣೋಪಲಕ್ಷಣಾಕ್ರಮ, ಅತದ್ವ್ಯಾವೃತ್ತಿಕ್ರಮ ಎಂಬ ಸೂಕ್ಷ್ಮ ಉಪಾಯಗಳಿಂದ ನಿನ್ನನ್ನು

ಪ್ರತಿಪಾದಿಸುತ್ತಾ ಕೊಂಡಾಡುವೆವು. ನಾವೂ ಅದೇ ಸದ್ಗತಿಯನ್ನು ಪಡೆಯುವೆವು. ಮತ್ತೆ ಉರಗೇಂದ್ರ ಭೋಗಭುಜದಂಡವಿಷಕ್ತಧಿಯಃ ಸ್ತ್ರಿಯಃ = ನಾಗರಾಜನ ಮುದ್ದಾದ ಮೈಯ್ಯಂತೆ ಸುಂದರವಾದ, ದೀರ್ಘವಾದ ನಿನ್ನ ಭುಜ ಶ್ರೀಯನ್ನು ನೋಡಿ ಮೆಚ್ಚಿ ಮರುಳಾಗಿ ಪ್ರೀತಿ ಪರವಶರಾದ ಗೋಪಿಕಾಸ್ತ್ರೀಯರೂ ಕೂಡ ಆ ಪರಂಧಾಮವನ್ನೇ ಸೇರಿದರು. ಸಮದೃಶಃ ತೇ = ಸರ್ವತ್ರ ಸಮದೃಷ್ಟಿಯ ನಿನಗೆ. ಸಮಾಃ = ನಾವೆಲ್ಲರೂ ಸಮಾನರೇ ಆಗಿದ್ದೇವೆ. ಇದು ಹೀಗೆ ನಾವು ಮಾತ್ರವೇ ಅಲ್ಲ. ತೇ ಅಂಘ್ರಿಸರೋಜಸುಧಾಃ ಸಮಾಃ = ನಿನ್ನ ಪಾದಕಮಲಗಳ ಮಕರಂದಾಸ್ವಾದ ಮಾಡುವ ಅಂದರೆ ಗಾಢಸ್ಮರಣತತ್ಪರರಾದ ಭಕ್ತರು ಶತ್ರುಗಳು. ಪ್ರೇಯಸಿಯರು ಶ್ರುತಿಗಳಾದ ನಮ್ಮಂತಹವರೆಲ್ಲರೂ ನಿನಗೆ ಸಮರೇ ಆಗಿರುತ್ತಾರೆ. ನಿನ್ನ ಸಮಾನುಗ್ರಹಪಾತ್ರರಾಗಿರುತ್ತಾರೆ. ಈ ಬಗೆಯ ಸಮತ್ವವು ನಿನ್ನಲ್ಲಿ ಮಾತ್ರವೇ ಕಾಣುವುದು.

ಈಗ ಶ್ರುತಿಗಳು ಪರಮಾರ್ಥತತ್ತ್ವವು ದುರ್ಜ್ಞೇಯವೆಂದು ನಿರೂಪಿಸುತ್ತಾ ಭಗವದ್ ಭಕ್ತಿಯೇ ಶ್ರೇಯಃ ಪ್ರಾಪ್ತಿಗೆ ಸುಲಭೋಪಾಯವೆಂದು ಒಪ್ಪಿ ಈ ರೀತಿ ಸ್ತುತಿಸುತ್ತಾರೆ -

ಕ ಇಹ ನು ವೇದ ಬತಾವರಜನ್ಮಲಯೋಽಗ್ರಸರಂ
ಯತ ಉದಗಾದೃಷಿರ್ಯಮನು ದೇವಗಣಾ ಉಭಯೇ ।
ತರ್ಹಿ ನ ಸನ್ನ ಚಾಸದುಭಯಂ ನ ಚ ಕಾಲಜವಃ
ಕಿಮಪಿ ನ ತತ್ರ ಶಾಸ್ತ್ರಮವಕೃಷ್ಯ ಶಯೀತ ಯದಾ ॥ ೧೧ ॥

ಹೇ ಪರಮೇಶ್ವರ, ಅಗ್ರಸರಂ = ಜಗತ್ಸೃಷ್ಟಿಗಿಂತಲೂ ಮತ್ತು ಜೀವರಜಾಗ್ರತ್ಕಾಲದ ಜ್ಞಾನಕರ್ಮವ್ಯವಹಾರಕ್ಕಿಂತಲೂ ಮೊದಲೇ ಸಿದ್ಧನಾದ ನಿನ್ನನ್ನು, ನಿನ್ನ ಪರಮಾರ್ಥತತ್ತ್ವವನ್ನು. ಇಹ = ಈ ಪ್ರಪಂಚದಲ್ಲಿ. ಅವರಜನ್ಮಲಯ: = ಆ ತರುವಾಯ ಆಧುನಿಕವಾಗಿ ಹುಟ್ಟಿ ಮತ್ತೆ ಸಾಯುತ್ತಿರುವ. ಕಃ ನು ವೇದ = ಯಾವನು ತಾನೇ ತಿಳಿದಾನು ? ಬತ = ಅಹೋ ಅಗಾಧ ಅದ್ಭುತ ರಹಸ್ಯ ವಿಷಯವಿದು. ಅಂದರೆ - ತತ್ತ್ವವನ್ನರಿತುಕೊಂಡರೆ ಆಯಿತು. ಇನ್ನು ಭಕ್ತಿಯ ಅಗತ್ಯವೇನು ಎಂದು ಕೆಲವರು ಭಾವಿಸಿಕೊಂಡಿರುತ್ತಾರೆ. ಅದು ಸರಿಯಲ್ಲ. ಏಕೆಂದರೆ - ಭಗವದನುಗ್ರಹವಿಲ್ಲದೇ

ಜ್ಞಾನಸಿದ್ಧಿಯೇ ಆಗುವುದಿಲ್ಲ. ಮೊಟ್ಟಮೊದಲನೆಯದಾಗಿ ಅಂದರೆ ಸೃಷ್ಟಿ ಪೂರ್ವದಲ್ಲಿ ಜ್ಞಾನ ಮಾಡಿಕೊಳ್ಳುವುದಕ್ಕೆ ಬೇಕಾದ ಸಾಧನ ಸಾಮಗ್ರಿಯೇ ಇರುವುದಿಲ್ಲ. (ಇದರಿಂದ ಸುಷುಪ್ತಿಸ್ಥಿತಿಯನ್ನು ಗ್ರಹಿಸಬೇಕು) ಯತಃ = ಯಾವ ಮಹಾನುಭಾವನ ದೆಸೆಯಿಂದ. ಋಷಿಃ ಉದಗಾತ್ = ತತ್ತ್ವಜ್ಞಾನಕ್ಕೆ ಪ್ರಮಾಣವಾದ ವೇದ ಸಹಿತ ಸೃಷ್ಟಿಕರ್ತನಾದ ಹಿರಣ್ಯಗರ್ಭನು ಹುಟ್ಟಿರುವನು. (ವಿಜ್ಞಾನಮಯ ಆತ್ಮನು ಉದ್ಭವಿಸಿಕೊಂಡಿರುವನು.) ಮತ್ತು ಆ ತರುವಾಯ, ಯಂ ಅನು = ಆ ಯಾವ ಹಿರಣ್ಯಗರ್ಭನನ್ನನುಸರಿಸಿ. (ವಿಜ್ಞಾನಮಯನ ಅನಂತರ) ಉಭಯೇ ದೇವಗಣಾಃ = ಆಧ್ಯಾತ್ಮಿಕ ಪ್ರಪಂಚ ಮತ್ತು ಆಧಿದೈವಿಕ ಪ್ರಪಂಚ ಹಾಗೂ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳು ಉಂಟಾಗಿರುವುವು. ಅಂದಾಗ ಆ ಸೃಷ್ಟಿಪೂರ್ವದ, ಸ್ವಪ್ನಜಾಗರಗಳ ಪೂರ್ವದ, ಪರಮಾರ್ಥಕಥೆಯು ಅರ್ಥವಾಗುವಂತಿಲ್ಲ. ಅದರ ಅರಿವಾಗುವುದಿಲ್ಲ. ಯದಾ ಶಾಸ್ತ್ರಂ ಅವಕೃಷ್ಯ ಶಯೀತ = ಇನ್ನು ಪ್ರಲಯ ಸ್ಥಿತಿಯಲ್ಲಿ, ಹೇ ಪರಮಾತ್ಮ, ಜ್ಞಾನಕ್ಕೆ ಪ್ರಮಾಣವಾದ ವೇದ ಶಾಸ್ತ್ರರಾಶಿಯನ್ನೆಲ್ಲಾ ನೀನು ನಿನ್ನಲ್ಲೇ ಅಡಗಿಸಿಕೊಂಡು ಯೋಗನಿದ್ರಾರೂಢನಾಗಿರುವೆಯೋ. ತರ್ಹಿ = ಆಗ. ಆತ್ಮಕೈವಲ್ಯವೇ ಇರುವುದರಿಂದ. ಸತ್ ನ = ಕಾರ್ಯವಸ್ತುವೂ ಇರುವುದಿಲ್ಲ. ಅಸತ್ ಚ ನ = ಕಾರಣವಸ್ತುವೂ ಇರುವುದಿಲ್ಲ. (ಸತ್ ನ = ಹಸು ಕುದುರೆ ಇತ್ಯಾದಿ ಭಾವವಸ್ತುಗಳು ಇರುವುದಿಲ್ಲ. ಮತ್ತು ಅಸತ್ ಚ ನ = ಮೊಲದಕೊಂಬು, ಗಗನಕುಸುಮ ಎಂಬಂತಹ ಅಭಾವವಸ್ತುವೂ ಇರುವುದಿಲ್ಲ.) ಉಭಯಂ ಚ ನ = ಆಧ್ಯಾತ್ಮಿಕವಾಗಲೀ, ಆಧಿದೈವಿಕವಾಗಲೀ ಎರಡೂ ಇರುವುದಿಲ್ಲ. ತತ್ರ ಕಿಮಪಿ ನ = ಅರಿಯುವುದಾಗಲೀ, ಅರಿಯಲ್ಪಡುವ ವಸ್ತುವಾಗಲೀ ಏನೊಂದೂ ಇರುವುದೇ ಇಲ್ಲ. ಕಾಲಜವಃ ಚ ನ = ಸೂಕ್ಷ್ಮ ಸ್ಥೂಲ ವಿಕಾರಗಳಿಗೆ ಅವಶ್ಯಕ ಆಧಾರವಾದ ಪರಿಣಾಮಸ್ವಭಾವದ ಕಾಲಗತಿ ಕೂಡ ಇರುವುದಿಲ್ಲ. ಹೀಗೆ ಸೃಷ್ಟಿಪೂರ್ವದಲ್ಲೂ, ಪ್ರಲಯೋತ್ತರದಲ್ಲೂ ತತ್ತ್ವಜ್ಞಾನಕ್ಕೆ ಅವಶ್ಯಕವಾದ ಸಾಧನ ಮತ್ತು ಪ್ರಮಾಣಗಳು ಇರುವುದಿಲ್ಲವಾದ್ದರಿಂದ ತತ್ತ್ವಜ್ಞಾನವು ದುರ್ಲಭ. ವಸ್ತುಸ್ಥಿತಿಯೇ ಹೀಗಿರುವುದರಿಂದ ಹಿಂದೆ ಹೇಳಿರುವಂತೆ ತ್ವದನುಪಥಂ ಕುಲಾಯಂ ಎಂಬ ಉಪದೇಶವೇ ಅಂದರೆ ಭಗವದ್ಭಕ್ತಿಯೇ ನಿಃಶ್ರೇಯಸ್ಸಿಗೆ ಮುಖ್ಯ ಎಂದು ಸಮರ್ಥಿತವಾಯಿತು. ಇನ್ನು ಸೃಷ್ಟಿಯಾದ ಈ ಮಧ್ಯಕಾಲದಲ್ಲಿ, ಪ್ರಕೃತ ಪ್ರಪಂಚದಲ್ಲಿ ಸಮ್ಯಗ್ಜ್ಞಾನ ಮಾಡಿಕೊಳ್ಳುವುದು

ಸುಲಭವೋ ಎಂದರೆ, ಈಗಲೂ ಸಾಧನೋಪದೇಶಗಳು ದುರ್ಲಭವೆಂದೇ ತೋರಿಸುತ್ತಾರೆ. ಮತ್ತು ಗುರುಗಳು ಸಿಕ್ಕುವುದೂ ದುರ್ಲಭವೆಂದು ತಿಳಿಸುತ್ತಾ ಸ್ತುತಿಸುವ ಶ್ಲೋಕ -

ಜನಿಮಸತಃ ಸತೋ ಮೃತಿ ಮುತಾತ್ಮನಿ ಯೇ ಚ ಭಿದಾಂ
ವಿಪಣಮೃತಂ ಸ್ಮರಂತ್ಯುಪದಿಶಂತಿ ತ ಆರುಪಿತೈಃ ।
ತ್ರಿಗುಣಮಯಃ ಪುಮಾನಿತಿ ಭಿದಾ ಯದಬೋಧಕೃತಾ
ತ್ವಯಿ ನ ತತಃ ಪರತ್ರ ಸ ಭವೇದವಬೋಧರಸೇ ॥ ೧೨ ॥

ತತ್ತ್ವಜ್ಞಾನವು ಸುಲಭವಾಗಿರುವುದಿಲ್ಲ. ಏಕೆಂದರೆ - ವಸ್ತುಪರೀಕ್ಷಕರ ಮತ್ತು ವಿದ್ಯೋಪದೇಶ ಮಾಡುವವರ ಬುದ್ಧಿಯೂ ಕೂಡ ಭ್ರಮೆ ಮೋಹಗಳಿಗೆ ಒಳಗಾಗಿರಬಹುದು. ಲೋಕದಲ್ಲಿ ವೈಶೇಷಿಕರು, ನೈಯಾಯಿಕರು, ಸಾಂಖ್ಯರು, ಪಾತಂಜಲರು ಮತ್ತು ಮೀಮಾಂಸಕರು. ಇವರು ದಾರ್ಶನಿಕರೆಂದು ಪ್ರಸಿದ್ಧರಾಗಿದ್ದಾರೆ. ಇವರು ತಾವೇ ತತ್ತ್ವದರ್ಶಿಗಳೆಂದುಕೊಂಡು ಶಿಷ್ಯರಿಗೆ ವಿದ್ಯೋಪದೇಶ ಮಾಡುತ್ತಿರುತ್ತಾರೆ. ಅವರು ತಿಳಿಸುವ ವಿಚಾರ ಹೇಗಿರುವುದೆಂದರೆ:- ವೈಶೇಷಿಕರು ನೈಯಾಯಿಕರೆಂಬ ತಾರ್ಕಿಕರು, ಯೇ ಅಸತಃ ಜನಿಂ ಸ್ಮರಂತಿ = ಮೊದಲು ಇಲ್ಲದಿದ್ದ ಜಗತ್ತು ಮೊದಲಾದ ಕಾರ್ಯಗಳು ಹೊಸದಾಗಿ ಹುಟ್ಟುವುವು ಎಂದೂ, ಮತ್ತು, ಸತಃ ಮೃತಿಂ ಸ್ಮರಂತಿ = ಸತ್ಯ ವಸ್ತುವಿಗೆ ನಾಶವುಂಟು ಎಂದೂ ಹೇಳುತ್ತಾರೆ. ಅಂದರೆ ಜೀವಾತ್ಮನಲ್ಲಿ ದುಃಖಾದಿಗಳು ವಾಸ್ತವವಾಗಿ ಇರುತ್ತವೆಂದೂ ಮೋಕ್ಷದಲ್ಲಿ ಆ ದುಃಖಾದಿಗಳು ನಾಶ ಹೊಂದುತ್ತವೆಂದೂ ಹೇಳುತ್ತಾರೆ. ಇನ್ನು ಸಾಂಖ್ಯರು, ಯೇ ಆತ್ಮನಿ ಭಿದಾಂ ಸ್ಮರಂತಿ = ಆತ್ಮನಲ್ಲಿ ಭೇದವನ್ನು ಹೇಳುತ್ತಾರೆ. ಅವರ ಮತದಲ್ಲಿ ಅನಂತ ಆತ್ಮರಿರುತ್ತಾರೆ. ಇನ್ನು ಪಾತಂಜಲರು ಆತ್ಮ ಭೇದವನ್ನು ಒಪ್ಪವರಲ್ಲದೇ ಮತ್ತೆ ವಾಸ್ತವವಾಗಿಲ್ಲದ ಜೀವಾತ್ಮ, ಪರಮಾತ್ಮಾ ಎಂಬ ಭೇದವನ್ನೂ ಹೇಳುತ್ತಾರೆ. ಉತ = ಇನ್ನು ಕೆಲವರು ಮೀಮಾಂಸಕರು, ಯೇ ವಿಪಣಂ ಋತಂ ಸ್ಮರಂತಿ = ಜೀವರ ಕರ್ತೃತ್ವ ಭೋಕ್ತೃತ್ವ ಮೊದಲಾದ ವ್ಯವಹಾರವೆಲ್ಲವೂ ಸತ್ಯವೆಂದೂ ಅದೆಲ್ಲವೂ ಶಾಸ್ತ್ರ ಪ್ರಮಾಣದಿಂದ ಪ್ರತಿಪಾದಿತವಾಗಿರುವುದೆಂದೂ ವಾದಿಸುತ್ತಾರೆ. ಆದರೆ ವಿಚಾರ ಮಾಡಿ

ನೋಡಿದರೆ, ತೇ = ಆ ವಾದಿಗಳೆಲ್ಲರೂ, ಆರುಪಿತೈಃ (ಆರೋಪಿತೈಃ) ತಮ್ಮ ತಮ್ಮ ಬುದ್ಧಿಯಿಂದ ಕಲ್ಪಿಸಿಕೊಂಡುದುದನ್ನೇ, ಆರೋಪ ಮಾಡಿಕೊಂಡುದುದನ್ನೇ, ಉಪದಿಶಂತಿ = ಇನ್ನೊಬ್ಬರಿಗೆ ಉಪದೇಶ ಮಾಡುವರು ಎನ್ನಬೇಕಾಗಿದೆ. ಏಕೆಂದರೆ - ತ್ರಿಗುಣಮಯಃಪುಮಾನ್ ಇತಿ ಯತ್ = ಮನುಷ್ಯನು ಅಂದರೆ ಜೀವಾತ್ಮನು ಗುಣತ್ರಯವುಳ್ಳವನೆಂಬುವುದೂ ಮತ್ತು ಭಿದಾ ಇತಿ = ಜೀವಾತ್ಮ ಪರಮಾತ್ಮ ಇತ್ಯಾದಿ ಆತ್ಮಭೇದ ಉಂಟೆಂಬುದೂ, ಅಬೋಧಕೃತಾ = ಅಜ್ಞಾನದಿಂದ ಅಂದರೆ ಆತ್ಮನ ಸ್ವರೂಪಜ್ಞಾನ ಇಲ್ಲದ್ದರಿಂದ ಉಂಟಾದುದಾಗಿದೆ. ಅದು ಮಿಥ್ಯಾಜ್ಞಾನವೇ ಸರಿ. ತತಃ ಪರತ್ರ = ಅವರು ಹೇಳುವುದಕ್ಕೆ ಬೇರೆಯಾದ ಅಂದರೆ ತ್ರಿಗುಣಗಳಿಲ್ಲದ, ಮಿಥ್ಯಾ - ಜ್ಞಾನವಿಲ್ಲದ, ಅಜ್ಞಾನ ತಮಸ್ಸಿಲ್ಲದ, ಅವಬೋಧರಸೇ ತ್ವಯಿ = ಜ್ಞಾನಾನಂದೈಕಸ್ವರೂಪದ ನಿನ್ನಲ್ಲಿ (ಬ್ರಹ್ಮಾಭಿನ್ನಾತ್ಮನಲ್ಲಿ) ಸಃ ನ ಭವೇತ್ = ಆ ಭೇದ ದೋಷವು ಇರುವುದೇ ಇಲ್ಲ. ಅಂದರೆ ಯಾ ಮಾ ಸಾ ಮಾಯಾ. ಯಾ ನ ವಿದ್ಯತೇ ಸಾ ಅವಿದ್ಯಾ, ಅಂದರೆ ಆತ್ಮನಲ್ಲಿ ಮಿಥ್ಯಾಜ್ಞಾನ ಮಾಯೆ ತಮಸ್ಸು ಮುಂತಾದ ದೋಷಗಳಿರುವುದಿಲ್ಲ. ಹೀಗೆ ಶ್ರುತಿಗಳು ಆತ್ಮನ ಸ್ವರೂಪವನ್ನು ಬಣ್ಣಿಸಿ ಸ್ತುತಿಸುತ್ತಾ ತತ್ತ್ವವಿಚಾರವನ್ನೇ ಪ್ರಸ್ತಾವಿಸುತ್ತವೆ.

ಮಿಥ್ಯಾಜ್ಞಾನವೇ ಆತ್ಮ ಭೇದ ಕಲ್ಪನೆಗೂ ಮತಭೇದಕ್ಕೂ ಕಾರಣವಾಗಿದೆ. ಆದ್ದರಿಂದ ಮೇಲೆ ಹೇಳಿದ ತಾರ್ಕಿಕರ ಮತಗಳೆಲ್ಲವೂ ತಪ್ಪು ತಿಳುವಳಿಕೆಯೇ ಎಂದು ಗೊತ್ತಾಗುವುದು. ಜ್ಞಾನ ಸ್ವರೂಪದ ಅದ್ವೈತಾತ್ಮನೇ ಪರಮಾರ್ಥ. ಎಂದಾಗ ಮನುಷ್ಯನಲ್ಲಿ ಜೀವಾತ್ಮನಲ್ಲಿ ಅಜ್ಞಾನವು ವಾಸ್ತವ ಎಂಬ ಗ್ರಹಣೆಯು ಆತ್ಮ ಸ್ವರೂಪದ ವಿಸ್ಮೃತಿಯಿಂದುಂಟಾದ ಭ್ರಾಂತಿಯೇ ಸರಿ. ಪ್ರಮಾತೃ ಪುರಷನ ಪ್ರತ್ಯಗಾತ್ಮನೇ ವಾಸ್ತವವಾಗಿ ಪರಮಾರ್ಥ ತತ್ತ್ವ. ಅವನೇ ಪರಮಾತ್ಮನು ಎಂಬುದನ್ನು ಭಕ್ತಿ, ಜ್ಞಾನ, ವೈರಾಗ್ಯ ಎಂಬ ಮಹಾ ಸಾಧನೆಗಳಿಂದಲೇ ಕಂಡುಕೊಳ್ಳಬೇಕು ಎಂದು ತಿಳಿಸಲಾಗಿದ್ದೆ. ಈ ಶ್ಲೋಕದಲ್ಲಿ ಪ್ರಸ್ತಾವಿಸಿರುವ ತತ್ತ್ವ ವಿಚಾರ ಕ್ರಮವನ್ನೇ ಮತ್ತೆ ಮುಂದುವರಿಸುತ್ತಾ ಸ್ತುತಿಸುವ ಶ್ಲೋಕ-

ಸದಿವ ಮನಸ್ತ್ರಿವೃತ್ ತ್ವಯಿ ವಿಭಾತ್ಯಸದಾಮನುಜಾತ್
ಸದಭಿಮೃಶಂತ್ಯಶೇಷಮಿದಮಾತ್ಮತಯಾಽಽತ್ಮವಿದಃ ।
ನಹಿ ವಿಕೃತಿಂ ತ್ಯಜಂತಿ ಕನಕಸ್ಯ ತದಾತ್ಮತಯಾ

ಸ್ವಕೃತ ಮನುಪ್ರವಿಷ್ಟಮಿದಮಾತ್ಮತಯಾಽವಸಿತಂ ॥ ೧೩ ॥

ತ್ರಿವೃತ್ = ಸತ್ವರಜಸ್ತಮೋಗುಣಮಯವಾದ. ಮನಃ = ಮನಸ್ಸು ಮೊದಲಾದ ಕರಣ (ಇಂದ್ರಿಯ) ಗ್ರಾಮವು. ತ್ವಯಿ = ಸರ್ವಾಧಿಷ್ಠಾನ ಚೇತನಾತ್ಮನಾದ ನಿನ್ನಲ್ಲಿ ಪರಮಾತ್ಮನಲ್ಲಿ, ಸತ್ ಇವ ವಿಭಾತಿ = ನಿಜವಾದ ಸದ್ವಸ್ತುವೋ ಎಂಬಂತೆ ತೋರುತ್ತಿರುವುದು. ಆದರೆ ಆ ಮನಸ್ಸು. ಅಸತ್ = ನಿಜ ಸದ್ವಸ್ತುವಾಗಿರುವುದಿಲ್ಲ, ಹುಸಿಯಾಗಿರುತ್ತದೆ. ಈ ವಿವೇಚನೆಯು ಕೇವಲ ಮನ ಆದಿ ಇಂದ್ರಿಯಗಳಿಗೆ ಮಾತ್ರವೇ ಅನ್ವಯಿಸುವುದೆಂದಲ್ಲ, ಆ ಮನುಜಾತ್ = ಮನಃ ಪ್ರಧಾನನಾದ ಮನುಷ್ಯನವರೆಗೂ ಅಂದರೆ ಕರ್ತೃ, ಕರ್ಮ ಮೊದಲಾದ ಕಾರಕಗಳೆಲ್ಲವೂ ಆತ್ಮನಲ್ಲಿ ಆರೋಪಿತವಾದ ಅಸತ್ ಪದಾರ್ಥಗಳೇ ಆಗಿರುತ್ತವೆ. ಅವಕ್ಕೆ ಸ್ವತಃ ಸತ್ತ್ವವು = ಸ್ಥಿತಿಯು ಇರುವುದಿಲ್ಲ. ಆರೋಪಾಧ್ಯಾಸ - ಭ್ರಾಂತಿಯಿಂದ ತೋರುತ್ತವೆ. ಸ್ವಪ್ನದಲ್ಲಿ ದೃಶ್ಯಗಳು ತೋರುವಂತೆ ಜಾಗ್ರತ್ತಿನಲ್ಲಿ ಆ ಕರ್ತೃಗಳೂ ಕಾರಕಗಳೂ ತೋರುವುವು. ಅಂದರೆ ಆಯಾಯಾ ಅವಸ್ಥೆಯಲ್ಲಿ ಆಯಾಯಾ ವ್ಯವಹಾರ ಪುರುಷ ದೃಷ್ಟಿಯಿಂದ ಮಾತ್ರವೇ ಇರತಕ್ಕವುಗಳಾಗಿರುತ್ತವೆ. ಅವು ಮಾಯಿಕ ಪದಾರ್ಥಗಳು. ಪಾರಮಾರ್ಥಿಕವಾಗಿ ಇರುವುದಿಲ್ಲ. ಹಾಗಾದರೆ ಜ್ಞಾನಿಗಳ ದೃಷ್ಟಿಯಲ್ಲಿ ದೇಹೇಂದ್ರಿಯಗಳೂ ಈ ಪ್ರಪಂಚವೂ ಇರುವುದಿಲ್ಲವೋ? ಅವರೂ ಲೋಕದಲ್ಲಿ ವ್ಯವಹಾರವನ್ನು ಮಾಡುತ್ತಿರುವರಲ್ಲಾ! ಅದು ಹೇಗೆ ? ಅಂದರೆ ಅದಕ್ಕೆ ಹೇಳುತ್ತಾರೆ - ಆತ್ಮವಿದಃ = ಪರಮಾರ್ಥತತ್ತ್ವ ಜ್ಞಾನಿಗಳು. ಅಶೇಷಂ ಇದಂ = ಜ್ಞಾತೃಸ್ವರೂಪದ ತಮ್ಮನ್ನೂ ಸೇರಿಸಿಕೊಂಡು ಈ ಸಮಸ್ತ ಜಗತ್ತನ್ನೂ, ಆತ್ಮತಯಾ = ಆತ್ಮಮಯ. ಆತ್ಮಸ್ವರೂಪವಾಗಿರುವುದರಿಂದಲೇ ಸತ್ ಅಭಿಮೃಶಂತಿ = ಸದ್ವಸ್ತುವೆಂದೇ ಅರಿಯುತ್ತಾರೆ. ಸರ್ವಂ ಖಲ್ವಿದಂಬ್ರಹ್ಮ ಎಂದೇ ತಿಳಿದಿರುತ್ತಾರೆ. ಆತ್ಮನಿಂ ಭಿನ್ನವಾಗಿ ಇರುವುದೆಂದು ಅರಿಯುವುದಿಲ್ಲ, ಹೇಳುವುದೂ ಇಲ್ಲ. ಆದ್ದರಿಂದ ಜ್ಞಾನಿಗಳು ಈ ದೃಶ್ಯಪ್ರಪಂಚವನ್ನು ಅಲಕ್ಷಿಸಬೇಕಾಗಿಲ್ಲ, ವರ್ಜಿಸಬೇಕಾಗಿಲ್ಲ. ಹೇಗೆಂದರೆ :- ಕನಕದ ಮೇಲೆ ಅಪೇಕ್ಷೆಯಿರುವವರು. ಕನಕಸ್ಯ ವಿಕೃತಿಂ = ಬಂಗಾರದ ಕಾರ್ಯವಾದ ಕಂಕಣ ಕುಂಡಲ. ಅಂಗುಲೀಯ ಮೊದಲಾದ ವಿಕಾರಗಳನ್ನು. ನಹಿ ತ್ಯಜಂತಿ = ವರ್ಜಿಸುವುದಿಲ್ಲಷ್ಟೆ! ತದಾತ್ಮತಯಾ = ಅವೂ ಬಂಗಾರವೇ ಆಗಿರುವುದರಿಂದ ತ್ಯಜಿಸುವುದಿಲ್ಲ, ಸಂಗ್ರಹಿಸುವರು. ಅವರ ನಿಶ್ಚಯವೇನೆಂದರೆ - ಇದಂ (ವಿಶ್ವಂ) ಸ್ವಕೃತಂ

= ಈ ಸಮಸ್ತಪ್ರಪಂಚವು ತಮ್ಮ ಏಕಾತ್ಮನಿಂದಲೇ ಉಂಟಾಗಿದೆ. ಅನುಪ್ರವಿಷ್ಟಂ ಚ = ತಮ್ಮ ಏಕಾತ್ಮನಿಂದಲೇ ಒಳಗೂ ಹೊರಗೂ ತುಂಬಿಕೊಂಡಿರುವುದಾಗಿದೆ. ಆತ್ಮನು ಜಗತ್ತಿನಲ್ಲಿ ಸದ್ರೂಪದಿಂದಲೂ ಚಿದ್ರೂಪದಿಂದಲೂ ಪೂರ್ಣವಾಗಿರುವನು. ಆದ್ದರಿಂದ ಬ್ರಹ್ಮ ಸತ್ಯಂ ಜಗನ್ಮಿಥ್ಯಾ. ಇದೇ ಪರಮಾರ್ಥ. ಹೀಗಿರುವುದನ್ನು ಅರಿತ ವಿವೇಕೀಜ್ಞಾನಿಗಳು ವ್ಯವಹಾರವನ್ನು ಯಥೋಚಿತವಾಗಿಯೇ ಮಾಡಿಕೊಂಡಿರುತ್ತಾರೆ. ಅವರ ವ್ಯವಹಾರಕ್ಕೇನೂ ಅನುಪಪತ್ತಿಯಿರುವುದಿಲ್ಲ. ಹೀಗೆ ಈ ಶ್ಲೋಕದಲ್ಲಿ ಸೋಪಪತ್ತಿಕವಾಗಿ ವಿಚಾರ ನಿರೂಪಣೆಯಾಗಿದೆ. ಆತ್ಮತಯಾ ಅವಸಿತಂ = ಸಕಲಚರಾಚರ ಜಗತ್ತೂ ಆತ್ಮಮಯವೇ ಎಂದು ನಿರ್ಣಯವಾಗಿದೆ.

ಪ್ರಾಸಂಗಿಕವಾಗಿ ಬಂದ ತತ್ತ್ವವಿಚಾರವನ್ನು ಸ್ವಲ್ಪಮಟ್ಟಿಗೆ ವಿವರಿಸಿ ಈಗ ಪುನಃ ಭಕ್ತಿ ಎಂಬ ಸಾಧನವೇ ಮುಖ್ಯವಾದುದೆಂದು ಸಮರ್ಥಿಸುತ್ತಾ ಸ್ತುತಿಸುತ್ತಾರೆ -

ತವ ಪರಿ ಯೇ ಚರಂತ್ಯಖಿಲಸತ್ತ್ವನಿಕೇತತಯಾ
ತ ಉತ ಪದಾऽऽಕ್ರಮಂತ್ಯವಿಗಣಯ್ಯ ಶಿರೋ ನಿರ್‌ಋತೇಃ ।
ಪರಿವಯಸೇ ಪಶೂನಿವ ಗಿರಾ ವಿಬುಧಾನಪಿ ತಾನ್
ತ್ವಯಿ ಕೃತಸೌಹೃದಾಃ ಖಲು ಪುನಂತಿ ನ ಯೇ ವಿಮುಖಾಃ ॥ ೧೪ ॥

ಹೇ ಪರಮೇಶ್ವರ, ಯೇ = ಯಾರು ಏಕಾಂತಭಕ್ತರೋ ಅವರು. ಅಖಿಲಸತ್ತ್ವನಿಕೇತತಯಾ = ನೀನು ಸಮಸ್ತ ಚರಾಚರಭೂತಗಳಿಗೂ ಮೂಲಾಧಾರನು, ಆಶ್ರಯನು, ಭೂತಾವಾಸನು ಆಗಿರುವುದರಿಂದ, ಅಂತಹ ವಾಸ್ತವಾಂಶವನ್ನು ಅರಿತುಕೊಂಡ ಅವರು, ತವ ಪರಿಚರಂತಿ = ಪರಮಾನುರಾಗ ಪೂರ್ವಕವಾಗಿ ನಿನ್ನ ಸೇವೆ ಮಾಡುತ್ತಾರೆ. ಅರ್ಚನ ವಂದನ ಭಜನ ಕ್ರಮಗಳಿಂದ ಉಪಾಸಿಸುತ್ತಾರೆ. ತೇ ಉತ = ಅಂತಹ ಏಕಾಂತ ಭಕ್ತರು ಮಾತ್ರವೇ, ಅವಿಗಣಯ್ಯ = ಏನೊಂದನ್ನೂ ಯಾರನ್ನೂ ಲಕ್ಷಿಸದೆ. ಅಂದರೆ ಏನೊಂದು ಹಂಗೂ ಇಲ್ಲದೇ, ಯಾವ ಅಧಿಕಾರೀ ಪುರುಷರನ್ನಾಗಲಿ, ಶಾಸ್ತ್ರಗಳ ವಿಧಿ ನಿಷೇಧ ನಿಬಂಧನೆಗಳನ್ನಾಗಲಿ ಲಕ್ಷ್ಯಮಾಡದೇ, ನಿರ್‌ಋತೇಃ ಶಿರಃ = ಮೃತ್ಯುವಿನ ಶಿರಸ್ಸನ್ನು. ಪದಾ ಆಕ್ರಮಂತಿ = ಕಾಲಿನಿಂದ ಮೆಟ್ಟಿ ಈ ಜನನ ಮರಣ ಪ್ರವಾಹ ರೂಪದ ಸಂಸಾರದಿಂದ ಮೇಲಕ್ಕೆದ್ದು ಮುಕ್ತರಾಗುವರು. ತ್ವಯಿಕೃತಸೌಹೃದಾಃ

= ನಿನ್ನಲ್ಲಿ ಪರಮಾನುರಾಗವುಳ್ಳ ಭಕ್ತರು, ಪುನಂತಿ ಖಲು = ತಮ್ಮ ಹೃದಯದಲ್ಲಿ ಪಾವನತತ್ತ್ವವನ್ನು ಧಾರಣೆ ಮಾಡಿರುವುದರಿಂದಲೇ ಸ್ವತಃ ಪರಿಶುದ್ಧರಾಗಿದ್ದು ಇನ್ನೊಬ್ಬರನ್ನೂ ಪಾವನಗೊಳಿಸಬಲ್ಲವರಾಗಿರುತ್ತಾರೆ. ಯೇ ವಿಮುಖಾಃ ತೇ ನ = ಭಗವದ್ವಿಮುಖರಾಗಿದ್ದು ಯಾರು ಭಕ್ತರಾಗಿರುವುದಿಲ್ಲವೋ ಅವರು ಯಾರನ್ನೂ ಪರಿಶುದ್ಧಗೊಳಿಸಲಾರರು. ಸ್ವತಃ ಅವರೂ ಶುದ್ಧರಾಗಿರುವುದಿಲ್ಲ. ಅಂತಹ ಜನಗಳ ಸ್ಥಿತಿಗತಿ ಏನಾಗಿರುವುದೆಂದರೆ :- ವಿಬುಧಾನಪಿ ತಾನ್ = ಅವರು ಎಷ್ಟೇ ವಿದ್ಯಾವಂತರು ಬುದ್ಧಿವಂತರು ಸಾಕ್ಷಾತ್ ದೇವತಾಪುರುಷರು ಆಗಿದ್ದರೂ ಅವರನ್ನು, ನೀನು, ಪಶೂನ್ ಇವ = ಪಶು ಪ್ರಾಣಿಗಳನ್ನು ಹೇಗೋ ಹಾಗೆ, ಗಿರಾ ಪರಿವಯಸೇ = ಮಾತಿನಿಂದಲೇ ಕಟ್ಟಿ ಹಾಕುತ್ತೀಯೆ. ಹಗ್ಗದಿಂದ ಕಟ್ಟಿ ಎಳೆದಾಡುವಂತೆ ಆಡಿಸುತ್ತೀಯೆ. ಅಂದರೆ - ವೇದ ಶಾಸ್ತ್ರ ವಿಧಿ ವಿಧಾನ ಎಂಬ ಕಟ್ಟುಪಾಡಿಗೆ ಸಿಕ್ಕಿಸುತ್ತೀಯೆ. ತತ್ತ್ವಜ್ಞಾನವಿಲ್ಲದ ಜನರು ತಮ್ಮ ಕುಟುಂಬ ಮತ್ತು ಜನಾಂಗದ ವ್ಯವಹಾರ ವ್ಯವಸ್ಥಾ ಕಾರಣವಾಗಿ ವೇದಶಾಸ್ತ್ರಗಳನ್ನು ಅವಲಂಬಿಸುತ್ತಾರೆ. ನಂಬಿಕೊಂಡಿರುತ್ತಾರೆ. ಆ ಶಾಸ್ತ್ರಗಳು ತಿಳಿಸುವುದೇನೆಂದರೆ:- ಪುರುಷಾರ್ಥ ಸಾಧನೆಗೆ ಧರ್ಮ ಕರ್ಮಗಳೇ ಮುಖ್ಯ ಸಾಧನವೆಂದೂ, ತಮ್ಮ ಯೋಗಕ್ಷೇಮಕ್ಕೆ ಅಗ್ನೀಂದ್ರಾದಿ ದೇವತೆಗಳನ್ನು ಆರಾಧಿಸಬೇಕೆಂದೂ ಬೋಧಿಸುತ್ತವೆ. ಆ ಶಾಸನಗಳನ್ನೇ ನಂಬಿದ ಜನರು ಕರ್ಮಮಾರ್ಗವನ್ನೇ ಅನುವರ್ತಿಸಿಕೊಂಡಿರುತ್ತಾರೆ. ಹೀಗೆ ನಿರಂತರ ಕರ್ಮಕರ್ತೃಗಳಾಗಿಯೂ ಫಲಭೋಕ್ತೃಗಳಾಗಿಯೂ ಇರುತ್ತಾ ಅಂತಹವರು ನಿತ್ಯ ಸಂಸಾರವನ್ನೇ ಅನುಭವಿಸಿಕೊಂಡಿರುತ್ತಾರೆ. ಹೀಗೆ ವಿಧಿ ನಿಷೇಧ ನಿಬಂಧನೆಗಳಿಗೆ ಸಿಲುಕಿಕೊಂಡಿರುವುದೇ ಭಗವಂತನು ಸಂಸಾರಿಗಳನ್ನು ಶಾಸ್ತ್ರರೂಪ ಮಾತಿನಿಂದ ಕಟ್ಟಿಹಾಕುವುದು.

ಜೀವ ಮತ್ತು ಈಶ್ವರ ಇವರಲ್ಲಿ ಸೇವ್ಯಸೇವಕಭಾವ ಸಂಬಂಧ ಇರುವುದೆಂದು ಹಿಂದೆ ಪ್ರಸ್ತಾವಿಸಿದೆ. ಈಗ ಆ ವಿಷಯವನ್ನು ಸಮರ್ಥಿಸುತ್ತಾ ಸ್ತುತಿಸುತ್ತಾರೆ -

ತ್ವಮಕರಣಃ ಸ್ವರಾಡಖಿಲಕಾರಕಶಕ್ತಿಧರಃ
ತವ ಬಲಿಮುದ್ವಹಂತಿ ಸಮದಂತ್ಯಜಯಾऽನಿಮಿಷಾಃ ।
ವರ್ಷಭುಜೋऽಖಿಲಕ್ಷಿತಿಪತೇರಿವ ವಿಶ್ವಸೃಜೋ

ವಿದಧತಿ ಯತ್ರ ಯೇ ತ್ವಧಿಕೃತಾ ಭವತಶ್ಚಕಿತಾಃ ॥ ೧೫ ॥

ಹೇ ಪರಮೇಶ್ವರ, ತ್ವಂ ಅಕರಣಃ = ನೀನು ಮನ ಆದಿ ಅಂತಃ ಕರಣವಿಲ್ಲದವನು ಮತ್ತು ಚಕ್ಷುರಾದಿ ಇಂದ್ರಿಯಗಳಿಲ್ಲದವನೂ ಆಗಿದ್ದೀಯೆ. ಆದರೂ ಅಖಿಲಶಕ್ತಿಧರಃ ಸ್ವರಾಟ್ = ಸ್ವಯಂ ಪ್ರಕಾಶದ ಜ್ಯೋತಿಸ್ವರೂಪನಾದ್ದರಿಂದ ಸಕಲ ಇಂದ್ರಿಯಗಳ ಶಕ್ತಿ ಉಳ್ಳವನಾಗಿದ್ದು ಮಹಾ ಪ್ರಭುವಾಗಿರುವೆ. ಅಂದರೆ ಎಲ್ಲಾ ಇಂದ್ರಿಯಗಳಿಗೆ ನೀನು ಸ್ವಚೈತನ್ಯವನ್ನು ಅನುಗ್ರಹಿಸುತ್ತಾ ಅವನ್ನು ಪ್ರವರ್ತನಗೊಳಿಸುವ ಸ್ವಾಮಿಯಾಗಿದ್ದೀಯೆ. ಸ್ವತಃ ಸಿದ್ಧಜ್ಞಾನಶಕ್ತಿಯಿರುವ ಸರ್ವಜ್ಞನಿಗೆ ವಿಷಯವನ್ನು ಗ್ರಹಿಸಲು ಇಂದ್ರಿಯಗಳ ಅಪೇಕ್ಷೆಯಿರುವುದಿಲ್ಲವಷ್ಟೆ ! ಹೀಗೆ ಸರ್ವಸ್ವತಂತ್ರನೂ ಸರ್ವಜ್ಞನೂ ಸರ್ವಶಕ್ತನೂ ಆಗಿರುವುದರಿಂದಲೇ ಪರಮಾತ್ಮನು ಸೇವ್ಯನಾಗಿರುವನೆಂದು ಸಮರ್ಥಿತವಾಯಿತು. ಸೂರ್ಯನಿಗೆ ಬೆಳಕಾಗಬೇಕಾದರೆ ಬೇರೊಂದು ದೀಪದ ಅಪೇಕ್ಷೆಯಿರುವುದಿಲ್ಲವಷ್ಟೆ ! ಈಶ್ವರನು ಕೂಟಸ್ಥ ಸಾಕ್ಷಿಯಾಗಿರುವುದರಿಂದ ಎಲ್ಲಾ ವಿಷಯಗಳನ್ನು ಆಗಿಂದಾಗಲೇ ಅರಿಯುವನು. ಅವನೇ ಪ್ರಾಣಿಗಳ ಮನ ಆದಿ ಜ್ಞಾನಸಾಧನೆಗಳಿಗೆ ಶಕ್ತಿಯನ್ನೊದಗಿಸಿ ಕೊಡುವ ಮೂಲಚಾಲಕನಾಗಿರುವುದರಿಂದ ಮಹಾ ಸ್ವಾಮಿಯಾಗಿರುತ್ತಾನೆ. ಆದ್ದರಿಂದಲೇ, ಅನಿಮಿಷಾಃ = ಜ್ಞಾನಿಗಳಾದ ಅಗ್ನೀಂದ್ರಾದಿ ದೇವತೆಗಳು, ವಿಶ್ವಸೃಜಃ ಅಪಿ = ಬ್ರಹ್ಮಪ್ರಜಾಪತಿಗಳು ಕೂಡ. ಅಜಯಾ = ಅವಿದ್ಯಾಮಾಯಾವೃತರಾಗಿರುವುದರಿಂದಲೇ, ತವ ಬಲಿಂ ಉದ್ವಹಂತಿ = ನಿನ್ನ ಪೂಜಾದಿ ಸೇವೆಯನ್ನು ಮಾಡುತ್ತಿರುತ್ತಾರೆ. ಸಮದಂತಿ ಚ = ತಾವೂ ಕೂಡ ಮನುಷ್ಯರಿಂದ ಅರ್ಪಿಸಲ್ಪಟ್ಟ ಹವ್ಯ ಕವ್ಯಗಳನ್ನು ಹವಿರ್ಭಾಗಗಳನ್ನು ಭುಂಜಿಸುತ್ತಾರೆ. ಇದು ಹೇಗಿದೆ ಎಂದರೆ - ವರ್ಷಭುಜಃ = ಒಂದೊಂದು ರಾಜ್ಯಭಾಗಕ್ಕೆ ಒಡೆಯರಾದ ರಾಜರು. ಅಖಿಲಕ್ಷಿತಿಪತೇಃ ಇವ = ಸಮಸ್ತ ಭೂಮಂಡಲಕ್ಕೆ ಅಧಿಪತಿಯಾದ ಸಾರ್ವಭೌಮನಿಗೆ ಕಪ್ಪ ಕಾಣಿಕೆಗಳನ್ನು ಒಪ್ಪಿಸುತ್ತಾ ಸೇವೆ ಮಾಡುವಂತೆಯೇ ಇದು. ಮತ್ತು ಯತ್ರತು = ಯಾವ ಯಾವ ಧರ್ಮ ಕರ್ಮ ಸ್ಥಾನ ಅಧಿಕಾರಗಳಲ್ಲಿ, ಯೇ ಅಧಿಕೃತಾಃ = ಯಾರು ಯಾರು ನಿಯುಕ್ತರಾಗಿರುತ್ತಾರೆಯೋ ಅವರು. ಭವತಃ ಚಕಿತಾಃ = ನಿನಗೆ ಯಾವಾಗಲೂ ಹೆದರಿಕೊಂಡು ಭಯದಿಂದಲೇ. ಬಲಿಂ ವಿದಧತಿ = ನಿನ್ನ ಪೂಜೆಯನ್ನು ಮಾಡುತ್ತಾರೆ. ಮತ್ತು ಆಯಾಯಾ ತಮ್ಮ ಕರ್ತವ್ಯ ಕರ್ಮಗಳನ್ನು ನಡೆಸುತ್ತಾ ನಿನ್ನ ಸೇವೆ ಮಾಡುತ್ತಾರೆ. ಈ ನಿರೂಪಣೆಯಿಂದ ಜೀವರು ಸೇವಕರಾಗಿರುತ್ತಾರೆಂದೂ

ಈಶ್ವರನು ಸೇವ್ಯನಾಗಿರುತ್ತಾನೆಂದೂ ಬೋಧಿಸಿದೆ. ಹೀಗೆ ಭಕ್ತಿ ವ್ಯವಹಾರದ ಸೇವ್ಯ ಸೇವಕಭಾವವನ್ನು ಬೋಧಿಸಿ ಪುನಃ ತತ್ತ್ವವಿಚಾರವನ್ನೇ, ಪ್ರತಿಪತ್ತಿಯನ್ನೇ ಪ್ರತಿಪಾದಿಸುತ್ತಾ ಸ್ತುತಿಸುತ್ತಾರೆ -

ಸ್ಥಿರಚರಜಾತಯಃ ಸ್ಯುರಜಯೋತ್ಥನಿಮಿತ್ತಯುಜೋ
ವಿಹರ ಉದೀಕ್ಷಯಾ ಯದಿ ಪರಸ್ಯ ವಿಮುಕ್ತ ತತಃ ।
ನಹಿ ಪರಮಸ್ಯ ಕಶ್ಚಿದಪರೋ ನ ಪರಶ್ಚ ಭವೇತ್
ವಿಯತ ಇವಾಪದಸ್ಯ ತವ ಶೂನ್ಯತುಲಾಂ ದಧತಃ ॥ ೧೬ ॥

ಹಿಂದಿನ ಶ್ಲೋಕದ ನಿರೂಪಣೆಯ ಪ್ರಕಾರ ಜೀವರ ಮನ ಆದಿ ಕರಣಗಳ ಪ್ರವರ್ತಕನು ಈಶ್ವರನು. ಕರಣ ಪರತಂತ್ರರಾದ ಜೀವರು ಈಶ್ವರನನ್ನು ಭಜಿಸಿಕೊಂಡಿರುತ್ತಾರೆ ಎಂದಾಗಿದೆ. ಈಶ್ವರನು ಸೇವ್ಯನಾಗಿದ್ದಾನೆಂಬುದಕ್ಕೆ ಇಷ್ಟುಮಾತ್ರವೇ ಕಾರಣವೆಂದಲ್ಲ, ಜೀವಾದಿ ಜಗತ್ತು ಈಶ್ವರನಿಂದ ಉತ್ಪನ್ನವಾಗಿರುವುದರಿಂದಲೂ, ಕಾರ್ಯವು ಸದಾ ಕಾರಣಕ್ಕೆ ಅಧೀನವಾಗಿರುವಂತೆ ಜೀವರು ಮತ್ತು ಜಗತ್ತು ಈಶ್ವರನಿಗೆ ಅಧೀನರೇ ಆಗಿರುತ್ತಾರೆ. ಸ್ವತಂತ್ರರಾಗಿರುವುದಿಲ್ಲ ಎಂದು ಈಗ ತೋರಿಸುತ್ತಾರೆ. ಹೇ ವಿಮುಕ್ತ = ನಿತ್ಯ ಮುಕ್ತ ಸ್ವಾಮಿಯೇ. ಅಜಯಾ ತವ ಯದಿ ವಿಹರಃ = ಅವಿದ್ಯಾ ಮಾಯಾ ಪ್ರಕೃತಿಯೊಡನೆ ನಿನ್ನ ಲೀಲಾ ವಿಹಾರವು ಯಾವಾಗ ಉಂಟಾಗಿರುವುದೋ ಆಗಲೇ. ತತಃ ಪರಸ್ಯ = (ದೃಶ್ಯಕ್ಕೆ ಸಾಕ್ಷಿಮಾತ್ರನಾಗಿರುವುದರಿಂದಲೇ) ಆ ಮಾಯಾ ಅವಿದ್ಯೆಗಳಿಂದ ಬೇರೆಯಾಗಿರುವ, ತವ ಉದೀಕ್ಷಯಾ = ನಿನ್ನ ದೃಷ್ಟಿಪ್ರೇರಣೆಯಿಂದ. ಉತ್ಥನಿಮಿತ್ತಯುಜಃ = ಈ ನಿಮಿತ್ತದಿಂದಲೂ ಮತ್ತು ಸ್ವನಿಮಿತ್ತ ಕಾರಣವಾದ ಸ್ವಪೂರ್ವಕರ್ಮಗಳ ಉದ್ಬೋಧನೆಗಳುಳ್ಳ, ಸ್ಥಿರಚರಜಾತಯಃ ಸ್ಯುಃ = ಚರಾಚರಾತ್ಮಕವಾದ ಶರೀರಿಗಳ ಹಾಗೂ ಪ್ರಪಂಚದ ಉತ್ಪತ್ತಿಯು ಆಗುವುದು. ಅಂದರೆ - ಮಾಯಾತೀತನಾದ ಕೂಟಸ್ಥಸಾಕ್ಷೀಶ್ವರನು ಅಮೋಘ ಮಹಿಮಾವೀರ್ಯನಾಗಿರುವುದರಿಂದಲೇ ಅವನ ದೃಷ್ಟಿ ಮಾತ್ರದಿಂದ ಸಮಸ್ತ ಸಾಕ್ಷ್ಯ - ದೃಶ್ಯರಾಶಿಯ ಚರಾಚರಭೂತಗಳ ಉತ್ಪತ್ತಿ ಉಂಟಾಗುವುದು. (ಇದು ಕಲ್ಪನೆಯಲ್ಲ. ಸ್ವಪ್ನದಲ್ಲಿ ಈ ಅನುಭವವಿರುವುದು ಕಂಡಿದೆ) ಆಗ ಯಥಾರ್ಥವಲ್ಲದಿದ್ದರೂ ಚಿತ್ರ ವಿಚಿತ್ರ ವಸ್ತುಗಳ ದರ್ಶನವಾಗುವುದು.

ಸ್ವಪ್ನದ್ರಷ್ಟೃವಿಗೆ ನಿದ್ರಾತಮಸ್ಸಿನ ಮತ್ತು ಸ್ವಪ್ನದ ವಸ್ತುಗಳ ಸಂಬಂಧವೇನೂ ಉಂಟಾಗಿರುವುದಿಲ್ಲ. ನಿದ್ರೆ ಎಂಬುದು ಬುದ್ಧಿಯ ಅವಸ್ಥೆಯಾಗಿರುವುದು. ನಿತ್ಯನಾದ ಸಾಕ್ಷಿಗೆ ಸೇರಿದ್ದಲ್ಲ. ಅಂತೆಯೇ ಮಾಯಾ ಅವಿದ್ಯೆಗಳೂ ಆತ್ಮನಿಗೆ (ಸಾಕ್ಷಿಗೆ) ಸೇರಿದವುಗಳಾಗಿರುವುದಿಲ್ಲ. ಏಕೆಂದರೆ - ದೃಕ್ಕು ಮತ್ತು ದೃಶ್ಯಗಳು ಯಾವಾಗಲೂ ಬೇರೆ ಬೇರೆಯಾಗಿಯೇ ಇರುವುವಷ್ಟೆ ! ಅಂದಾಗ ಸಾಕ್ಷೀ ಆತ್ಮನು ಆಗಲೂ ಅಸಂಗನೇ ಆಗಿರುತ್ತಾನೆ. ಅವನ ದೃಷ್ಟಿಪ್ರಭಾವದಿಂದ ಜೀವರ ಪೂರ್ವಕರ್ಮಗಳ ಪ್ರಬೋಧನೆ ಮತ್ತು ಹಾಗೆಯೇ ದೇಹಾದಿ ಪ್ರಪಂಚಕಾರ್ಯಗಳ ಉತ್ಪತ್ತಿ ಆಗುವುದರಿಂದ ಆತ್ಮನಲ್ಲಿ ಯಾವ ವಿಕಾರ ವೈಷಮ್ಯಗಳೂ ಉಂಟಾಗುವುದೇ ಇಲ್ಲ. ವಿಯತ ಇವ ಶೂನ್ಯತುಲಾಂ ದಧತಃ = ಆಕಾಶದಂತೆ ಶೂನ್ಯದೊಡನೆ ಹೋಲಿಕೆಯುಳ್ಳ. ಅಪದಸ್ಯ = ಅಮೂರ್ತಸ್ವರೂಪದ ಹಾಗೂ ಮಾತಿಗೆ ಮತ್ತು ಮನಸ್ಸಿಗೆ ವಿಷಯನಲ್ಲದ. ಪರಮಸ್ಯ = ಪರಮ ಕಾರುಣಿಕನೂ ಮತ್ತು ಅತ್ಯಂತ ಶ್ರೇಷ್ಠನೂ ಆದ. ತವ = ನಿನಗೆ. ನಹಿ ಕಶ್ಚಿದಪರಃ = ಸ್ವಕೀಯ, ಮಿತ್ರ, ಎಂಬುವವನೂ ಇಲ್ಲ. ಮತ್ತು ಕಾರ್ಯ ಎಂಬುದೂ ಇರುವುದಿಲ್ಲ. ಪರಃಚನಭವೇತ್ = ಪರಕೀಯ ಶತ್ರು ಎಂಬುವವನೂ ಇಲ್ಲ. ಕಾರಣ ಎಂಬುವುದೂ ಇರುವುದಿಲ್ಲ. ಈಶ್ವರಾತ್ಮನ ಸ್ವಭಾವವು ಸರ್ವದಾ ಸರ್ವರಿಗೂ ಸಮವೇ ಆಗಿರುವುದಾಗಿದೆ. ಆತ್ಮನಿಂಪೂರ್ವಕಾರಣ ಎಂಬುವುದಿಲ್ಲ. ಆತ್ಮನಿಂದೀಚೆಗೆ ಕಾರ್ಯವಾವುದೂ ಸತ್ಯವಾಗಿರುವುದಿಲ್ಲ ಎಂದು ಹೇಳಿರುವುದರಿಂದ ಜಗತ್ತು ಮಿಥ್ಯಾ ಎಂದು ಸಿದ್ಧಾಂತವಾಗುವುದು. ಹೀಗೆ ಈ ಶ್ಲೋಕದಲ್ಲಿ ಆತ್ಮ ಪ್ರತಿಪತ್ತಿ ವಿಚಾರವನ್ನು ಬೋಧಿಸುತ್ತಾ ಸ್ತುತಿಸಿದ್ದಾರೆ.

ಈವರೆಗಿನ ತತ್ತ್ವವಿಚಾರದಿಂದ ತಿಳಿಯುವುದೇನೆಂದರೆ - ಅವಿದ್ಯೋಪಾಧಿಯುಳ್ಳ ಜೀವರು ಪರಮಾತ್ಮನಿಂದ ಬೇರೆ ಎಂಬಂತೆ ಉದ್ಭವಿಸಿಕೊಂಡಿರುತ್ತಾರೆ. ಅವರು ಈಶ್ವರಾಧೀನರಾಗಿ ಸಂಸಾರವನ್ನನುಭವಿಸುತ್ತಾ ಈಶ್ವರನನ್ನು ಭಜಿಸುತ್ತಾರೆ ಎಂದಿಷ್ಟು ತಿಳಿದಹಾಗಾಯಿತು. ಈಗ ಪೂರ್ವಪಕ್ಷಿಯು ಆಕ್ಷೇಪವೆತ್ತುತ್ತಾನೆ. ಏನೆಂದರೆ :- ಆತ್ಮನು ಮತ್ತು ಅವಿದ್ಯೆಯು ಒಂದೊಂದೇ ಆಗಿರುವ ಪಕ್ಷದಲ್ಲಿ ಒಬ್ಬನು ಮುಕ್ತಿ ಪಡೆದರೆ ಎಲ್ಲರಿಗೂ ಮೋಕ್ಷವಾಗಬೇಕಾಗುವುದು. ಅವಿದ್ಯೆಯು ಬೇರೆ ಬೇರೆ. ನಾನಾ ಅವಿದ್ಯೆ ಎಂದು ಹೇಳಿದರೆ ಆಗ ಏಕರೂಪದ ಜೀವಾತ್ಮನಿಗೆ ಒಂದು ಅವಿದ್ಯೆ ನಾಶವಾದರೂ ಬೇರೆ ಅವಿದ್ಯೆಯ ಸಂಬಂಧ ತಪ್ಪದೇ ಇರುವುದರಿಂದ ಯಾರಿಗೂ ಮೋಕ್ಷವೇ ಆಗುವುದಿಲ್ಲ

ಎಂದಾಗುವುದು. ಹೀಗೆ ತರ್ಕವಿರುವುದರಿಂದ ಆತ್ಮನಲ್ಲೇ ಭೇದವನ್ನು ಒಪ್ಪಬೇಕು. ಅಂದರೆ - ಅನೇಕ ಆತ್ಮರಿರುತ್ತಾರೆ. ಅವರೆಲ್ಲರೂ ನಿತ್ಯರೇ, ವ್ಯಾಪಕರೇ ಎಂದು ಕೆಲವು ವಾದಿಗಳು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ನಿಜ ಆತ್ಮನಿಗೆ ಅವಿದ್ಯಾಸಂಬಂಧವು ವಾಸ್ತವವಾಗಿರುವುದೇ ಇಲ್ಲ. ಅದು ಭ್ರಾಂತಿಯಿಂದ ಕಲ್ಪಿತವಾಗಿರುತ್ತದೆ. ಆ ಭ್ರಾಂತಿಯನ್ನು ವಿಚಾರವಿವೇಕದಿಂದ ಯಾರು ಕಳೆದುಕೊಂಡಿರುತ್ತಾರೋ ಅವರು ಮುಕ್ತರು. ಯಾರು ಭ್ರಾಂತರಾಗಿಯೇ ಇರುತ್ತಾರೋ ಅವರು ಬದ್ಧರು. ಅವುಕ್ತರು ಎಂಬ ವ್ಯವಸ್ಥೆಯಿರುವುದರಿಂದ ಎಲ್ಲವೂ ಸಮಂಜಸವಾಗಿರುತ್ತದೆ. ಈಶ್ವರನಲ್ಲಿ ನಿತ್ಯಜ್ಞಾನವೇ ಸಿದ್ಧವಿದ್ದು ಅವಿದ್ಯಾಸಂಬಂಧವೇ ಇರುವುದಿಲ್ಲವಾದ್ದರಿಂದ ಅವನು ನಿತ್ಯ ಮುಕ್ತನೇ ಮತ್ತು ವೇದಸಿದ್ಧಾನ್ತದಲ್ಲಿ ಆತ್ಮೈಕ್ಯವೇ ಪ್ರಸಿದ್ಧವಾಗಿದೆ. ಅಲ್ಲದೇ ಮೇಲೆ ಹೇಳಿದವರ ಮತವು ಶ್ರುತಿಯ ಅಂತರ್ಯಾಮಿಬ್ರಾಹ್ಮಣಕ್ಕೆ ವಿರುದ್ಧವಾಗಿರುವುದರಿಂದಲೂ ಅಂಗೀಕಾರಾರ್ಹವಾಗಿರುವುದಿಲ್ಲ. ಹೀಗೆಂಬುದನ್ನು ವಿವರಿಸುತ್ತಾ ವಿಚಾರವಿವೇಕವನ್ನೇ ಬೋಧಿಸುತ್ತಾ ಸ್ತುತಿಸುತ್ತಾರೆ -

ಅಪರಿಮಿತಾ ಧ್ರುವಾಸ್ತನುಭೃತೋ ಯದಿ ಸರ್ವಗತಾಃ
ತರ್ಹಿ ನ ಶಾಸ್ಯತೇತಿ ನಿಯಮೋ ಧ್ರುವ ನೇತರಥಾ ।
ಅಜನಿ ಚ ಯನ್ಮಯಂ ತದವಿಮುಚ್ಯ ನಿಯಂತೃ ಭವೇತ್
ಸಮಮನುಜಾನತಾಂ ಯದಮತಂ ಮತದುಷ್ಟತಯಾ ॥ ೧೭ ॥

ಈ ಶ್ಲೋಕದಲ್ಲಿ ಮೇಲೆ ಹೇಳಿದ ಪೂರ್ವಪಕ್ಷಿಗಳ ಮತಕ್ಕೆ ವಿರೋಧವನ್ನು ತೋರಿಸಿದ್ದಾರೆ. ಅನ್ತರ್ಯಾಮಿ ಬ್ರಾಹ್ಮಣಭಾಗದಲ್ಲಿ ಹೇಳಿರುವುದೇನೆಂದರೆ :- ಒಬ್ಬ ಚೇತನಾತ್ಮನೇ ಅವಿಕಾರಿಯಾಗಿ ಸರ್ವದಲ್ಲೂ ಸಮ ಪೂರ್ಣನಾಗಿದ್ದುಕೊಂಡು ಎಲ್ಲವನ್ನೂ ತಾನು ಅರಿಯುತ್ತಾ ತಾನು ಯಾರಿಂದಲೂ ಅರಿಯಲ್ಪಡದೇ ಇರುವವನು ಎಂದಿರುವುದರಿಂದ ಅನೇಕ ಆತ್ಮರು ಎಂಬ ಕಲ್ಪನೆಯು ವೇದವಿರುದ್ಧ ಎಂದಾಯಿತು. ಆ ಅರ್ಥವನ್ನೇ ಇಲ್ಲಿ ಉಪಪಾದಿಸಿದೆ. ತನುಭೃತಃ = ಶರೀರಿಗಳಾದ ಜೀವರು, ಅಪರಿಮಿತಾಃ = ಪರಿಚ್ಛಿನ್ನರಾಗಿರದೇ ಅನಂತ ಸಂಖ್ಯೆಯುಳ್ಳವರೂ ಆಗಿದ್ದು, ಸರ್ವಗತಾಃ = ಸರ್ವವ್ಯಾಪಕರೂ ಇದ್ದು, ಧ್ರುವಾಃ ಯದಿ = ನಿತ್ಯರಾಗಿಯೂ ಇರುವ ಪಕ್ಷದಲ್ಲಿ, ತರ್ಹಿ

= ಆಗ. ಶಾಸ್ಯತಾ ಇತಿ ನ = ಆ ಜೀವರು ಈಶ್ವರನಿಂದ ನಿಯಮ್ಯರು (ಆಳಲ್ಪಡುವರು) ಎಂಬುದು ಹೊಂದುವುದಿಲ್ಲ. ಏಕೆಂದರೆ :- ಈಶ್ವರನೂ ಜೀವರೂ ಸಮವೆಂದಾಗುವುದರಿಂದ ನಿಯಮ್ಯನಿಯಾಮಕಭಾವ ಸಮಂಜಸವಾಗುವುದಿಲ್ಲ. ಇತರಥಾ ನ = ಹಾಗಿರದಿದ್ದರೆ ಅಸಮಂಜಸ ಎಂದಾಗುವುದಿಲ್ಲ. ಅವರಲ್ಲಿ ಸಮತ್ವವಿರುವುದಿಲ್ಲೆಂದಾದರೆ ಆಗ ನಿಯಮ್ಯ ನಿಯಾಮಕಭಾವವು ಸಂಭವಿಸಬಹುದು. ಹೀಗೆ ಇಲ್ಲಿ ಭೇದವನ್ನು ಹೇಳಿರುವಂತೆ ತೋರಿದರೂ, ವೇದವು ಹೇಳುವ ನಿಯಮ್ಯ ನಿಯಾಮಕಭಾವದ ಪರಿ ಏನೆಂದರೆ - ಯನ್ಮಯಂ ಅಜನಿ = ಯಾವ ಉಪಾದಾನ ಕಾರಣದಿಂದ ಎಂತಹ ಕಾರ್ಯ - ವಿಕಾರವಾಗಿ ಉಂಟಾಗಿರುವುದೋ, ತತ್ ಅವಿಮುಚ್ಯ = ಆ ಉಪಾದಾನ ಕಾರಣ ವಸ್ತುವು ತನ್ನ ಸ್ವರೂಪವನ್ನು ಬೇರ್ಪಡಿಸಿಕೊಳ್ಳದೇ, ನಿಯಂತೃ ಭವೇತ್ = ಆ ಕಾರ್ಯ ವಿಕಾರಕ್ಕೆ ನಿಯಾಮಕವಾಗಿರುವುದು. ಮಡಿಕೆ ಎಂಬ ಕಾರ್ಯಕ್ಕೆ ಮಣ್ಣು ಉಪಾದಾನ ಕಾರಣವಾಗಿದ್ದು ನಿಯಾಮಕವಾಗಿರುವುದಷ್ಟೆ! ಇಷ್ಟು ಮಾತ್ರವನ್ನೇ ದೃಷ್ಟಾಂತವಾಗಿ ಇಲ್ಲಿ ಗ್ರಹಿಸಬೇಕು. ಏಕೆಂದರೆ ಮಣ್ಣು ಕಾರ್ಯವಾದಾಗ ಅನುವರ್ತಿಸಿಕೊಂಡಿದ್ದು ವಿಕಾರಗೊಂಡಿರುತ್ತದೆ. ಪರಮಾತ್ಮನು ಚರಾಚರ ಜಗತ್ತಾಗಿ ಉದ್ಭವಿಸಿದಾಗ ಅವನಲ್ಲಿ ವಿಕಾರವೇನೂ ಉಂಟಾಗಿರುವುದಿಲ್ಲ. ಅಂದಾಗ ಘಟಾಕಾಶಕ್ಕೆ ಮಹಾಕಾಶವು ಕಾರಣ ಮತ್ತು ನಿಯಾಮಕ ಆಗಿರುವಂತೆ ಎಂದು ತಿಳಿಯಬೇಕು. ಘಟಾಕಾಶ ಉಂಟಾದಾಗ ಮಹಾಕಾಶದಲ್ಲಿ ವಿಕಾರವೇನೂ ಉಂಟಾಗುವುದಿಲ್ಲ. ಆದ್ದರಿಂದಲೇ, ಸಮಂ = ಉಪಾದಾನ ವಸ್ತು (ಈಶ್ವರನು) ಯಾವಾಗಲೂ ಸಮವಾಗಿಯೇ ಇರುವುದು. ವಿಕಾರಗೊಂಡಿರುವುದಿಲ್ಲ ಎಂದು ಹೇಳಿದೆ. ಹೀಗೆ ವೇದ ಪ್ರತಿಪಾದನೆಯ ಪ್ರಕಾರ ಚರಾಚರ ಜಗತ್ತಿಗೆ ಪರಮಾತ್ಮನು ಕಾರಣ ಮತ್ತು ನಿಯಾಮಕನಾಗಿದ್ದು ಅವಿಕಾರಿಯೇ ಆಗಿರುತ್ತಾನೆ ಎಂದಾಗ ಜೀವನು ಈಶ್ವರಾಂಶ (ಕಾರ್ಯ) ಎನ್ನುವುದು ಜಗತ್ತು ಕಾರ್ಯ, ಎಂಬುದು ಹುಸಿ - ಮಿಥ್ಯೆ ಎಂದಾಗುವುದಷ್ಟೆ! ಇದು ಹೇಗೆ ಎಂದರೆ - ಬಿಂಬದಿಂದ ಪ್ರತಿಬಿಂಬ ಕಾರ್ಯ ಎಂಬಂತೆ ಅಥವಾ ಹಗ್ಗದಲ್ಲಿ ಸರ್ಪೋತ್ಪತ್ತಿ ಎಂಬಂತೆ ಈ ಚರಾಚರೋತ್ಪತ್ತಿ(ಸೃಷ್ಟಿ) ಎಂದು ತಿಳಿಯಬೇಕು. ಕಾರಣ ವಸ್ತುವು ನಿಜಸತ್ಯವಾಗಿರುತ್ತದೆ. ಅದರಲ್ಲಿ ಅವಿದ್ಯಾಮಾಯಾ ಭ್ರಾಂತಿಯಿರುವವರಿಗೆ ಕಾರ್ಯವಸ್ತುವು ಸದ್ವಸ್ತುವಿನಂತೆ ತೋರುತ್ತದೆ ಎಂದಾಯಿತು. ಹೀಗೆ ಕಾರಣವೆಂದೇ ಕಂಡುಕೊಳ್ಳಬೇಕಾದ ಯಾವ ಅದೃಶ್ಯ

ಸೂಕ್ಷ್ಮ ವಸ್ತುವುಂಟೋ ಆ ವಸ್ತುವೇ ಪರಮಾತ್ಮನು ಎಂದು ನಿರ್ಣಯವಾಗುವುದು. ಸ್ವಾಮಿ, ಉಪದೇಶ ಮಾಡುವಾಗ ಇಲ್ಲಿ ಯಾವುದೋ ಅದು ಎಂದು ಏತಕ್ಕೆ ಪರ್ಯಾಯವಾಗಿ ಹೇಳುತ್ತೀರಿ ? ನಿರ್ದಿಷ್ಟವಾಗಿ ಇವನೇ ಪರಮಾತ್ಮನು ಎಂದು ನೇರವಾಗಿ ಏತಕ್ಕೆ ಹೇಳುವುದಿಲ್ಲ? ಎಂದರೆ ಅದಕ್ಕೆ ಹೇಳುತ್ತಾರೆ - ಯತ್ ಅನುಜಾನತಾಂ ಅಮತಂ = ಯಾರು ಪರಮಾತ್ಮನನ್ನು ತಿಳಿದುಕೊಂಡಿದ್ದೇನೆ. ನಾನು ಹೇಳುತ್ತೇನೆ ಎಂದು ಹೇಳುವರೋ ಅವರು ನಿಜ ತಿಳಿದವರಲ್ಲ. ಅವರಿಗೆ ನಿಜ ತಿಳಿದಿರುವುದೇ ಇಲ್ಲ. ಅವರು ತತ್ತ್ವವನ್ನು ಅರಿತವರಲ್ಲ ಎಂದೇ ಹೇಳಬೇಕು ಮತ್ತು ಮತದುಷ್ಟತಯಾ = ತಿಳಿಯಲ್ಪಟ್ಟ ಸಮಸ್ತ ವಸ್ತು ವಿಷಯಗಳು ದೋಷವುಳ್ಳವುಗಳೇ, ಶುದ್ಧವಾಗಿರುವುದಿಲ್ಲ ಅಂದರೆ ಅನೃತ ಜಡ ದುಃಖ ರೂಪಗಳೇ ಆಗಿರುತ್ತವೆ ಎಂದು ನಿರೂಪಿಸಿದ್ದಾರೆ. ಪರಮಾತ್ಮನನ್ನು ನೇರವಾಗಿ ಹೇಳಲಾಗುವುದಿಲ್ಲ. ತಿಳಿಯುವಾತನ, ಅರಿಯುವಾತನ ಹಾಗೂ ಹೇಳುವಾತನ ಪ್ರತ್ಯಗಾತ್ಮನೇ ನಿಜ ಪರಮಾತ್ಮನಾಗಿರುತ್ತಾನೆ. ಈ ಅಭಿಪ್ರಾಯದಿಂದಲೇ ಸಮಂ ಎಂಬ ಮಾತಿನಿಂದ ಬೋಧಿಸಲಾಗಿದೆ ಮತ್ತು ಆರೋಪಿತವಾದದ್ದಕ್ಕೆಲ್ಲಾ ಬಾಧೆಯನ್ನು ಹೇಳಿದೆ. ಹಾಗೆ ಬಾಧೆಗೆ ವಿಷಯನಾಗದೇ ಇರುವ, ಭದ್ರವಾಗಿ ಉಳಿದುಕೊಳ್ಳುವ ಸತ್ಯವಸ್ತುವನ್ನೇ ಹೇ ಧ್ರುವ = ಶಾಶ್ವತನೇ ಎಂದು ಸಂಬೋಧಿಸಿದೆ, ಧ್ರುವ ಎಂದರೆ ಅಪವಾದಕ್ಕೆ ಅವಧಿ ಭೂತನಾದ, ಅಲ್ಲಗಳೆಯಲಾಗದ ನಿಶ್ಚಲ ನಿರ್ವಿಕಾರಿ ವಸ್ತು ಎಂದರ್ಥ.

ಹೀಗೆ ವಿಚಾರಕ್ರಮದಿಂದ ಸೋಪಾಧಿಕರಾದ ಜೀವರು ಮತ್ತು ಜಗತ್ತಿನ ಸೃಷ್ಟಿಯೂ ಮಾಯಿಕ, ಪರಮಾರ್ಥವಲ್ಲ, ಮಿಥ್ಯೆಯೆಂದಾಯಿತು ಮತ್ತೆ ಇದನ್ನೇ ಸಮರ್ಥಿಸುತ್ತಾ ವಿಚಾರಕ್ರಮವನ್ನೇ ಅನುಸರಿಸಿ ಮುಂದುವರೆದು ಸ್ತುತಿಸುತ್ತಾರೆ -

ನ ಘಟತ ಉದ್ಭವಃ ಪ್ರಕೃತಿಪೂರುಷಯೋರಜಯೋಃ
ಉಭಯಯುಜೋ ಭವಂತ್ಯಸುಭೃತೋ ಜಲಬುದ್ಬುದವತ್ ।
ತ್ವಯಿ ತ ಇಮೇ ತತೋ ವಿವಿಧನಾಮಗುಣೈಃ ಪರಮೇ
ಸರಿತ ಇವಾರ್ಣವೇ ಮಧುನಿ ನಿಲಿಲ್ಯುರಶೇಷರಸಾಃ ॥ ೧೮ ॥

ಅಜಯೋಃ ಪ್ರಕೃತಿಪೂರುಷಯೋಃ ಉದ್ಭವಃ ನ ಘಟತೇ = ಹುಟ್ಟದೇ ಇರುವ ಪ್ರಕೃತಿ ಮತ್ತು ಪುರುಷ ಇವರ ಹುಟ್ಟು ಎಂಬುವುದು ನಿಜವಾಗಿ ಸಂಭವಿಸುವುದೇ ಇಲ್ಲ.

ಪ್ರಕೃತಿ ಎಂದರೆ ನಾಮ ರೂಪ ಬೀಜವಾದ ಮಾಯೆಯು ಈಶ್ವರ ಪ್ರಕೃತಿಯು. ಜೀವ ಪ್ರಕೃತಿ ಅವಿದ್ಯೆ ಎನ್ನುತ್ತಾರೆ. ಪೂರಷನೇ ಪುರುಷನು ಚೈತನ್ಯಸ್ವಭಾವದ ಚೇತನಾತ್ಮನು ಎಂದು ತಿಳಿಯಬೇಕು. ಈ ಪ್ರಕೃತಿ ಪುರುಷರಿಬ್ಬರೂ ಅಜರು. ಅಂದರೆ - ಎಂದೂ ಹೊಸದಾಗಿ ಹುಟ್ಟುವವರಲ್ಲ. ಇಲ್ಲದಿರುವುದೇ ಅವಿದ್ಯೆ. ಅಲ್ಲದಿರುವುದೇ ಮಾಯೆ ಎಂದರಿಯಬೇಕು. ಆದರೆ ಲೋಕದಲ್ಲಿ ಕಂಡುಬರುವ. ಅಸುಭೃತಃ = ಪ್ರಾಣ ದೇಹಧಾರಿಗಳಾದ ಜೀವರು. ಜಲಬುದ್ಬುದವತ್ = ನೀರಿನಗುಳ್ಳೆಯಂತೆ. ಉಭಯಯುಜಃ ಭವಂತಿ = ಎರಡೂ ಸೇರಿಕೊಂಡಿರುವಂತೆ ಇರುತ್ತಾರೆ. ನೀರು ಮತ್ತು ಗಾಳಿ ಸೇರಿಕೊಂಡು ಗುಳ್ಳೆ ಇರುತ್ತದೆ. ಪ್ರಕೃತಿ ಪುರುಷರು ಸೇರಿಕೊಂಡು ಜೀವರು ಆಗಿರುತ್ತಾರೆ. ಅಂದರೆ ಶ್ರುತ್ಯುಕ್ತಿಪ್ರಕಾರ ಜೀವರು ವಾಸ್ತವವಾಗಿ ಹುಟ್ಟದಿದ್ದರೂ ಮಾಯಿಕವಾಗಿ - ಸ್ವಪ್ನದಂತೆ ಹುಟ್ಟಿರುವವರು ಎಂದು ತಿಳಿಯಬೇಕು. ನಿಜವಾಗಿ ಅಲ್ಲದಿದ್ದರೂ ವ್ಯಾವಹಾರಿಕವಾಗಿ ಹುಟ್ಟಿರುತ್ತಾರೆ ಎಂದಾಯಿತು. ನಿದ್ದೆಯಲ್ಲಿ ಕನಸು. ಬಿಂಬದಿಂದ ಪ್ರತಿಬಿಂಬ. ಹಗ್ಗದಲ್ಲಿಹಾವು ಹುಟ್ಟಿದಂತೆ ಜೀವರ (ಆಭಾಸ) ಹುಟ್ಟುಎಂದು ಅರ್ಥಮಾಡಿಕೊಳ್ಳಬೇಕು. ಮತ್ತು ಇಲ್ಲಿ ಜಲಬುದ್ಬುದವತ್ ಎಂಬ ದೃಷ್ಟಾಂತದಿಂದ ತಿಳಿದುಕೊಳ್ಳಬೇಕಾದ್ದೇನೆಂದರೆ - ಗುಳ್ಳೆಗೆ ನೀರು ಉಪಾದಾನ ಕಾರಣ. ಗಾಳಿಯು ನಿಮಿತ್ತಕಾರಣ. ಇದು ಪ್ರಮಾಣಸಿದ್ಧ. ಪ್ರಕೃತ ಜೀವಾದಿ ಚರಾಚರಜಗತ್ತು ಉಂಟಾಗಿರುವಲ್ಲಿ ಪರಮಾತ್ಮನು ಉಪಾದಾನಕಾರಣ. ಪ್ರಕೃತಿಯು ನಿಮಿತ್ತಕಾರಣ ಎನ್ನಬೇಕು. ಆದರೆ ಹೀಗೆ ಉದ್ಭವಿಸಿದ ಕಾರ್ಯವು ಮಾಯಿಕವಾಗಿರುವುದರಿಂದ ಗ್ರಹಣೆಯಾಗುವಾಗ ವ್ಯತ್ಯಸ್ತವಾಗಿ ತಿಳಿಯುವುದು. ತಿರುಗುಮುರುಗು ಆಗುವುದು. ಇದೇ ಮಾಯಾ ಸ್ವಭಾವ. ಅಂದರೆ ಮಾಯೆಯೇ ಉಪಾದಾನ ಕಾರಣ ಎಂದೂ ಚೇತನನೇ ನಿಮಿತ್ತಕಾರಣ ಎಂದೂ ಗ್ರಹಣೆಯಾಗುವುದು. ಪುರುಷನು ನಿರ್ವಿಕಾರಿಯಾಗಿದ್ದರೂ ಪ್ರಕೃತಿಯು ಪರಿಣಾಮ ಸ್ವಭಾವವುಳ್ಳದಾಗಿರುತ್ತದೆ. ಹೀಗಿರುವಾಗ, ಪ್ರಕೃತಿ ಪರಿಣಾಮರೂಪದ ಕಾರ್ಯ ಅಂದರೆ ದೇಹದ ಉತ್ಪತ್ತಿಯಾದಾಗ ಜೀವರ ಉತ್ಪತ್ತಿ ಆದಂತೆ ತೋರುವುದು. ವಾಸ್ತವವಾಗಿ ಜೀವರ ಉತ್ಪತ್ತಿ ಆಗಿರುವುದಿಲ್ಲ. ಜೀವಸ್ವರೂಪದಲ್ಲಿ ಯಾವ ವಿಕಾರ ಪರಿಣಾಮವೂ ಉಂಟಾಗಿರುವುದಿಲ್ಲ. ಈ ಅಂಶವನ್ನು ಹಿಂದಿನ ಶ್ಲೋಕದಲ್ಲಿ ಅವಿಮುಚ್ಯ ಎಂಬ ಮಾತಿನಿಂದ ತಿಳಿಸಿಕೊಡಲಾಗಿದೆ. ಏವಂಚ ಶ್ರುತಿಯು ತಿಳಿಸಿರುವಂತೆ ಪ್ರಕೃತಿಪುರುಷರ

ಸಂಯೋಗದಿಂದ - ಅವಿದ್ಯಾಮಾಯಾ ಮೂಲಕ ಅಭೇದಾಧ್ಯಾಸದಿಂದ ಶರೀರಗಳು - ಜೀವರು ಉಂಟಾಗಿರುತ್ತಾರೆ. ಈ ಜೀವರು ಆದಿಯಲ್ಲಿ ಪರಮಾತ್ಮ ಸ್ವರೂಪದಲ್ಲಿರುವಂತೆ ಅಂತ್ಯದಲ್ಲಿಯೂ ಉಪಾಧಿಮಾತ್ರಕ್ಕೇ ಲಯ ಎಂಬುದನ್ನು ಶ್ರುತಿ ಪ್ರಮಾಣದಿಂದಲೇ ತೋರಿಸುತ್ತಾರೆ. ತತಃ = ಆಮೇಲೆ ಅಂತ್ಯಕಾಲದಲ್ಲಿ (ಸುಷುಪ್ತಿ - ಪ್ರಲಯ) ತೇ ಇಮೇ = ಆ ಕಾರ್ಯೋಪಾಧಿಗಳು ಮತ್ತು ತತ್ಸಹಿತರಾದ ಜೀವಾತ್ಮರೂ ಕೂಡ. ಪರಮೇತ್ವಯಿ = ನಿರುಪಾಧಿಕನಾದ, ನಿರತಿಶಯನಾದ ನಿನ್ನಲ್ಲೇ. ವಿವಿಧ ನಾಮಗುಣೈಃ ಸಹ = ಮೊದಲಿನ ವ್ಯವಹಾರದ ನಾನಾ ನಾಮರೂಪಗಳೊಡನೆ. ನಿಲಿಲ್ಯುಃ = ಸೇರಿ ಅಡಗಿ ಹೋಗುತ್ತಾರೆ. ಇದಕ್ಕೆ ದೃಷ್ಟಾಂತ ತೋರಿಸುತ್ತಾರೆ. - ಮಧುನಿ ಅಶೇಷರಸಾಃ ಇವ = ಜೇನುರಸದಲ್ಲಿ ಬೇರೆ ಬೇರೆ ಜಾತಿ ಹೂವುಗಳ ರಸಗಳು ಒಟ್ಟು ಸೇರಿ ಒಂದೇ ರಸವಾಗುವಂತೆ (ಇದು ಸುಷುಪ್ತಿ ಎಂಬ ಲಯಕ್ಕೆ ದೃಷ್ಟಾಂತ, ಜೇನಿನಲ್ಲಿ ಪುಷ್ಪರಸಗಳು ವಿಶೇಷರೂಪದಿಂದ ತೋರದಿದ್ದರೂ ಸಾಮಾನ್ಯ ರಸರೂಪದಿಂದಿರುವುವು) ಈಗ ಮುಕ್ತಿ ಎಂಬ ಲಯಕ್ಕೆ ದೃಷ್ಟಾಂತ ಹೇಳುತ್ತಾರೆ - ಅರ್ಣವೇ ಸರಿತಃ ಇವ = ಸಮುದ್ರದಲ್ಲಿ ಸಮಸ್ತ ನದಿಗಳೂ ತಮ್ಮ ನಾಮ ರೂಪಗಳನ್ನು ಬಿಟ್ಟು ಸೇರಿಹೋಗುವುವು. ಆಗ ಸಾಮಾನ್ಯರೂಪದಿಂದಲಾಗಲೀ ವಿಶೇಷ ರೂಪದಿಂದಾಗಲೀ (ಹಾಗೆಯೇ ಪ್ರಕೃತಿ ಪುರುಷರು ಎಂಬ ಭೇದವೂ ಇರುವುದಿಲ್ಲ) ನದಿಗಳು ಇರುವುದಿಲ್ಲ. ಸಮುದ್ರಮಾತ್ರವೇ ಇರುವುದು. ಅದ್ವಿತೀಯ ಆತ್ಮನೇ ಸತ್ಯವಾಗಿ ಇರುವನು.

ಹೀಗೆ ಪ್ರತಿಪತ್ತಿ - ವಿಚಾರಕ್ರಮವನ್ನು ಪ್ರಸ್ತಾವಿಸಿ ಇದರಲ್ಲಿ ಅವಿದ್ಯಾ ಮಾಯಾ ಎಂಬ ಸೂಕ್ಷ್ಮ ಪ್ರಮೇಯವು ಸೇರಿಕೊಂಡಿರುವುದರಿಂದ ತತ್ತ್ವಗ್ರಹಣೆಯು ತೊಡಕಿನದಾಗಿರುವುದು. ದುರ್ಜ್ಞೇಯವಾಗಿರುವುದು. ಆದ್ದರಿಂದ ಈಗ ಅದರಂತೆ ತೊಡಕಿಲ್ಲದ ಸುಗಮವಾದ ಪ್ರಪತ್ತಿ ಎಂಬ ಭಕ್ತಿಸಾಧನವನ್ನೇ ಅನುವರ್ತಿಸಿಕೊಳ್ಳುವುದು ಕ್ಷೇಮಕರವೆಂದು ತಿಳಿಸುತ್ತಾ ಸ್ತುತಿಸುತ್ತಾರೆ.

ನೃಷು ತವ ಮಾಯಯಾ ಭ್ರಮಮಮೀಷ್ವಗತ್ಯ ಭೃಶಂ
ತ್ವಯಿ ಸುಧಿಯೋಽಭವೇ ದಧತಿ ಭಾವಮನುಪ್ರಭವಂ ।
ಕಥಮನುವರ್ತತಾಂ ಭವಭಯಂ ತವ ಯದ್ ಭ್ರುಕುಟಿಃ

ಸೃಜತಿ ಮುಹುಸ್ತ್ರಿಣೇಮಿರಭವಚ್ಛರಣೇಷು ಭಯಂ ॥ ೧೯ ॥

ಲೋಕಸಾಮಾನ್ಯವಾಗಿ ವಿಷಯ ಭೋಗಾಸಕ್ತಿಯಿಂದಿರುವ, ಅಮೀಷು ನೃಷು = ಈ ಮನುಷ್ಯರಲ್ಲಿ. ತವ ಮಾಯಯಾ = ನಿನ್ನ ಮಾಯಾ ಪ್ರಭಾವದಿಂದ. ಭೃಶಂ ಭ್ರಮಂ = ಪದೇ ಪದೇ ವಿಶೇಷವಾಗಿ ಉಂಟಾಗುವ ಮೋಹ ಭ್ರಾಂತಿಯನ್ನು. ಅವಗತ್ಯ = ಪರ್ಯಾಲೋಚನೆಯಿಂದ ಅರಿತುಕೊಂಡು. ಸುಧಿಯಃ = ಮೇಧಾವಿಗಳಾದ ಯೋಗಿಗಳು. ಅನುಪ್ರಭವಂ = ಹುಟ್ಟಿದಾಗಲೆಲ್ಲಾ ಪ್ರತಿಜನ್ಮದಲ್ಲಿಯೂ. ಅಭವೇ ತ್ವಯಿ = ಸಂಸಾರಿಯಲ್ಲದ ಮತ್ತು ಸಂಸಾರಶತ್ರುವಾದ ನಿನ್ನಲ್ಲಿ. ಭಾವಂ ದಧತಿ = ಪ್ರೇಮ ಮಾಡುತ್ತಾರೆ ಭಕ್ತಿಭಾವವನ್ನೇ ತಾಳಿಕೊಂಡಿರುತ್ತಾರೆ. ಆ ಭಕ್ತರನ್ನು. ಭವಭಯಂ = ಈ ಸಂಸಾರಭಯವು. ಕಥಂ ಅನುವರ್ತತಾಂ = ಹೇಗೆ ತಾನೇ ಬೆನ್ನುಹತ್ತುವುದು ? ಅಂದರೆ ಅಂತಹ ಭಕ್ತರನ್ನು ಸಂಸಾರತಾಪವು ಪೀಡಿಸಲಾರದು. ಯತ್ = ಏಕೆಂದರೆ - ತ್ರಿಣೇಮಿಃ ತವ ಭ್ರುಕುಟಿಃ - ಹಗಲು ರಾತ್ರಿ ಸಂಧ್ಯೆ ಎಂಬ ಅಥವಾ ಗ್ರೀಷ್ಮಕಾಲ. ವರ್ಷಾಕಾಲ. ಹಿಮಕಾಲ ಎಂಬ ಕಾಲಚಕ್ರರೂಪದ ನಿನ್ನ ಘೋರ ಹುಬ್ಬು (ಕ್ರೂರದೃಷ್ಟಿ) ಅಭವಚ್ಛರಣೇಷು = ನಿನ್ನನ್ನಾಶ್ರಯಿಸದ ಅಭಕ್ತಜನರ ವಿಷಯದಲ್ಲಿ ಮಾತ್ರವೇ ಮುಹುಃ ಭಯಂ = ಪದೇ ಪದೇ ವ್ಯಾಧಿ ಜರಾ ಮರಣಾದಿ ಭಯವನ್ನು. ಸೃಜತಿ - ಉಂಟುಮಾಡುವುದು. ಭಗವದ್‌ಭಕ್ತರು ಕಾಲಚಕ್ರದ ಭಯವಿಲ್ಲದೇ ಅಂದರೆ ಮರಣಭಯವೂ ಇಲ್ಲದೆ ನಿರ್ಭಯರಾಗಿರಬಲ್ಲರು. ಅವರೇ ಧೀರರು ಎಂದು ತಾತ್ಪರ್ಯ.

ಈವರೆಗೆ ನಿರೂಪಿಸಿದ ಭಕ್ತಿ ಜ್ಞಾನ ವೈರಾಗ್ಯ ಎಂಬ ಭಾಗವತಧರ್ಮೋಪದೇಶವನ್ನು ಯಾರು ಅನುಸರಿಸಿಕೊಂಡು ಇರುವುದಿಲ್ಲವೋ ಮತ್ತು ದೇವರಲ್ಲಿಯೂ ಗುರುವಿನಲ್ಲಿಯೂ ಆಶ್ರಯ ಮಾಡದೇ ಭಕ್ತಿಮಾಡದೆಯೇ ಇರುತ್ತಾರೋ ಅಂತಹ ಪಾಮರ-ಕೃಪಣರ ದೌರ್ಭಾಗ್ಯ. ದುಃಸ್ಥಿತಿಗತಿಯನ್ನು ತೋರಿಸುತ್ತಾ ಸ್ತುತಿಸುತ್ತಾರೆ-

ವಿಜಿತಹೃಷೀಕವಾಯುಭಿರದಾಂತಮನಸ್ತುರಗಂ
ಯ ಇಹ ಯತಂತಿ ಯಂತುಮತಿಲೋಲಮುಪಾಯಖಿದಃ ।
ವ್ಯಸನಶತಾನ್ವಿತಾಃ ಸಮವಹಾಯ ಗುರೋಶ್ಚರಣಂ
ವಣಿಜ ಇವಾಜ ಸಂತ್ಯಕೃತಕರ್ಣಧರಾ ಜಲಧೌ ॥ ೨೦ ॥

ಹೇ ಅಜ - ಜನ್ಮಾದಿ ವಿಕಾರಗಳಿಲ್ಲದ ಮಹಾಪ್ರಭುವೇ, ಇಹ = ಈ ಜಗತ್ತಿನಲ್ಲಿ, ಯೇ = ಯಾರು, ಶ್ರೇಯಸ್ಸಾಧನೆ ಮಾಡುವೆವೆಂದು ಯತ್ನಿಸುವ ಜನರು. ವಿಜಿತ ಹೃಷೀಕ ವಾಯುಭಿಃ = ಯೋಗಭ್ಯಾಸ ಮಾಡುವ ಮೂಲಕ ಪ್ರಾಣವಾಯುವನ್ನೂ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನೂ ಗೆದ್ದುಕೊಳ್ಳುವೆವೆಂದು ಆಶಿಸಿ, ಅತಿಲೋಲಂ ಅದಾನ್ತಮನಸ್ತುರಗಂ = ಅತ್ಯಂತ ಚಂಚಲವಾದ ಮತ್ತು ವಶಪಡಿಸಿಕೊಳ್ಳಲು ದುಸ್ಸಾಧ್ಯವಾದ ಮನಸ್ಸೆಂಬ ಕುದುರೆಯನ್ನು. ಯಂತುಂ ಯತಂತಿ = ಬಿಗಿಹಿಡಿದಿಟ್ಟುಕೊಳ್ಳಲು ಪ್ರಯತ್ನ ಮಾಡುತ್ತಿರುತ್ತಾರೆಯೋ, ಅವರು. ಉಪಾಯಖಿದಃ = ಇಂದ್ರಿಯಗಳನ್ನು ಪಳಗಿಸಿಕೊಳ್ಳಲು ಪ್ರಯತ್ನ ಮಾಡುವ ಕಷ್ಟದಲ್ಲಿಯೇ ಆಯಾಸಪಟ್ಟುಕೊಂಡಿರುತ್ತಾರೆ. ನಿಜವಾಗಿ ಅವರ ಆಸೆಯು ಮತ್ತು ಪ್ರಯತ್ನವೂ ಸಫಲವಾಗುವುದಿಲ್ಲ. ಕೈಗೂಡುವುದಿಲ್ಲ. ಗುರೋಃ ಚರಣಂ ಸಮವಹಾಯ = ವಿದ್ಯಾಗುರುವಿನ ಮತ್ತು ಜಗದ್ಗುರುವಾದ ನಿನ್ನ ಪಾದಪದ್ಮಾಶ್ರಯವನ್ನು ತ್ಯಜಿಸಿರುವ ಅವರು. ವ್ಯಸನ ಶತಾನ್ವಿತಾಃ = ನೂರಾರು ಚಿಂತೆ ಕಷ್ಟ ಕಾರ್ಪಣ್ಯಗಳಿಗೆ ಸಿಕ್ಕಿಕೊಂಡವರೇ ಆಗಿರುತ್ತಾರೆ ಎನ್ನಬೇಕು. ಏಕೆಂದರೆ ಅವರು, ಜಲಧೌ ಅಕೃತಕರ್ಣಧರಾಃ ವಣಿಜ ಇವ ಸಂತಿ = ಸಮುದ್ರದಲ್ಲಿ ಹಡಗಿನ ಪ್ರಯಾಣ ಮಾಡುವಾಗ ಚತುರ ಅಂಬಿಗನನ್ನಿಟ್ಟುಕೊಳ್ಳದ ಸಮುದ್ರವ್ಯಾಪಾರಿಗಳಂತೆ ಇರುತ್ತಾರೆ. ನಾವಿಕನಿಲ್ಲದ ಹಡಗನ್ನೇರಿ ಸಮುದ್ರ ಪ್ರಯಾಣ ಮಾಡುವವರು ಅಲ್ಲಿ ಸಂಭವಿಸುವ ಬಿರುಗಾಳಿ ಹೊಡೆತಕ್ಕೆ ಸಿಕ್ಕಿ ಹಡಗಿನೊಡನೆ ತಾವೂ ಆಪತ್ತಿನಲ್ಲಿ ಬೀಳುವರು. ಹಾಗೇಯೇ ಅಭಕ್ತರು ಸಂಸಾರಕ್ಲೇಶಗಳಿಗೇ ಸಿಕ್ಕಿಕೊಂಡಿರುತ್ತಾರೆ.

ಮತ್ತೆ ಈಗ ಭಗವದುಪಾಸಕರ ಧನ್ಯತೆಯನ್ನೂ ಇತರರ ದುಃಸ್ಥಿತಿಯನ್ನೂ ತೋರಿಸುತ್ತಾ ಸ್ತುತಿಸುತ್ತಾರೆ -

ಸ್ವಜನಸುತಾತ್ಮದಾರಧನಧಾಮಧರಾಸುರಥೈಃ
ತ್ವಯಿ ಸತಿ ಕಿಂ ನೃಣಾಂ ಶ್ರಯತ ಆತ್ಮನಿ ಸರ್ವರಸೇ ।
ಇತಿ ಸದಜಾನತಾಂ ಮಿಥುನತೋ ರತಯೇ ಚರತಾಂ
ಸುಖಯತಿ ಕೋ ನ್ವಿಹ ಸ್ವವಿಹತೇ ಸ್ವನಿರಸ್ತಭಗೇ ॥ ೨೧ ॥

ಹೇ ಪರಮೇಶ್ವರ, ನೃಣಾಂ ಆತ್ಮನಿ = ಸಕಲ ಮನುಷ್ಯರ ಪ್ರತ್ಯಗಾತ್ಮನಾದ.

ಸರ್ವರಸೇ = ಸಕಲ ಸುಖ ಆನಂದಗಳ ಮೂಲಸ್ರೋತನಾದ. ತ್ವಯಿ ಸತಿ = ನೀನು ನಿತ್ಯ ಸನ್ನಿಹಿತನಾಗಿರಲು. ಶ್ರಯತಃ = ಅಂತಹ ನಿನ್ನನ್ನು ಆಶ್ರಯಿಸಿ ಉಪಾಸಿಸುವ ಭಕ್ತನಿಗೆ, ಸ್ವಜನಸುತಾತ್ಮದಾರಧನಧಾಮಧರಾಸುರಥೈಃ ಕಿಂ = ಜ್ಞಾತಿ ಬಂಧುಗಳು, ಮಕ್ಕಳು, ಸ್ವದೇಹ, ಹೆಂಡಿರು, ಹಣ, ಮನೆಮಠ, ಭೂಮಿಕಾಣಿ, ರಥ ಆದಿ ವಾಹನ ಸಂಪತ್ತು ಇವುಗಳನ್ನು ಕಟ್ಟಿಕೊಂಡು ಏನು ಪ್ರಯೋಜನ? ಏನು ಉಪಯೋಗ? ಅಂದರೆ - ಭಗವದ್ಭಕ್ತನಿಗೆ ಈ ಬಾಹ್ಯದ ಸಂಪತ್ತುಗಳಿಂದ ಲಾಭ ಸುಖ ಎನ್ನಿಸುವುದಿಲ್ಲ, ಅವರಿಗೆ ತಮ್ಮ ಅಂತರಾತ್ಮನಾದ ನಿನ್ನ ಲಾಭದಿಂದಲೇ ಸಮಸ್ತ ಇಷ್ಟಾರ್ಥಸಿದ್ಧಿಯೂ ಕೈಗೂಡಿದೆಂದು ನಿಶ್ಚಯವಿರುವುದು. ಸರ್ವರಸೇ ಎಂಬ ವಿಶೇಷಣದಿಂದ ಇಷ್ಟು ತಾತ್ಪರ್ಯವು ತೋರುವುದು. ಇತಿ ಸತ್ ಅಜಾನತಾಂ = ಇಂತಹ ಅಗಣಿತ ಲಾಭದ ಪರಮಾರ್ಥವನ್ನು ಅರಿಯದೇ ಕೃಪಣರಾದ, ರತಯೇ ಮಿಥುನತಃ ಚರತಾಂ = ಸುಖಾಭಿಲಾಷೆಯಿಂದ ಸ್ತ್ರೀ ಪುರುಷ ಪರಸ್ಪರ ಸಂಗ ಸಾಹಚರ್ಯದಿಂದ ವ್ಯವಹರಿಸಿಕೊಂಡಿರುವಂತಹವರಿಗೆ, ಇಹ ಕಃ ನು ಸುಖಯತಿ = ಈ ಪ್ರಪಂಚದಲ್ಲಿ ಯಾರು ಯಾವ ವಸ್ತುವು ತಾನೇ ನಿಜ ಸುಖವನ್ನು ಕೊಟ್ಟೀತು? ಏಕೆಂದರೆ - ಸ್ವವಿಹತೇ = ಇಲ್ಲಿನ ವಸ್ತು ವಿಷಯಗಳು ಸ್ವಯಂ ನಷ್ಟಪ್ರಾಯ, ಅಶಾಶ್ವತ, ಮಿಥ್ಯಾ ಆಗಿರಲು, ಮತ್ತು ಸ್ವನಿರಸ್ತಭಗೇ = ಭೋಕ್ತೃಗಳಾದ ಮನುಷ್ಯರು ಸ್ವಯಂ ಮರ್ತ್ಯರಾಗಿದ್ದು ಸಮಸ್ತ ಕ್ಷೇಮ ಭಾಗ್ಯಗಳನ್ನು ಕಳೆದುಕೊಂಡವರೂ ಆಗಿರಲು ಅವರಿಗೆ ಸುಖಶಾಂತಿಯೋಗ ಎಲ್ಲಿಯದು?

ಈಗ ಭಗವದ್ಭಕ್ತಯೋಗಿಗಳು ಧನ್ಯಕೃತಾರ್ಥರಾಗಿ ಕಾಮಚಾರಿಗಳಾಗಿರುವರೆಂಬುದನ್ನು ವರ್ಣಿಸುತ್ತಾ ಸ್ತುತಿಸುವ ಶ್ಲೋಕವಿದು -

ಭುವಿ ಪುರುಪುಣ್ಯತೀರ್ಥಸದನಾನ್ಯೃಷಯೋ ವಿಮದಾಃ
ತ ಉತ ಭವತ್ಪದಾಂಬುಜಹೃದೋಽಘಭಿದಂಘ್ರಿಜಲಾಃ ।
ದಧತಿ ಸಕೃನ್ಮನಸ್ತ್ವಯಿ ಯ ಆತ್ಮನಿ ನಿತ್ಯಸುಖೇ
ನ ಪುನರುಪಾಸತೇ ಪುರುಷಸಾರಹರಾವಸಥಾನ್ ॥ ೨೨ ॥

ಹೇ ಪರಮೇಶ್ವರ, ಋಷಯಃ = ನಿನ್ನ ಭಕ್ತರಾದ ಯೋಗಿಗಳು. ಭುವಿ = ಈ ಪ್ರಪಂಚದಲ್ಲಿ ತಾವು ದೇಹಧಾರಿಗಳಾಗಿರುವ ಪರ್ಯಂತವೂ. ಪುರುಪುಣ್ಯತೀರ್ಥಸದನಾನಿ

ಉಪಾಸತೇ = ಪಾಪಪರಿಶೋಧಕಗಳಾದ ಹಾಗೂ ಅಪಾರ ಪುಣ್ಯ ಹೇತುಗಳಾದ ತೀರ್ಥಕ್ಷೇತ್ರಗಳನ್ನೂ ಮತ್ತು ಭಗವನ್ಮಂದಿರಗಳನ್ನೂ (ಆಶ್ರಯಿಸಿಕೊಂಡಿರುತ್ತಾರೆ) ಸಂದರ್ಶಿಸಿಕೊಂಡಿರುತ್ತಾರೆ. ತೇ ಉತ ಭವತ್ಪದಾಂಬುಜಹೃದಃ = ಅವರು ಯದ್ಯಪಿ ನಿನ್ನ ಚರಣ ಕಮಲಗಳನ್ನು ಹೃದಯದಲ್ಲಿ ಧರಿಸಿಕೊಂಡಿರತಕ್ಕವರು - ನಿತ್ಯಸ್ಮರಣೆಯುಳ್ಳವರು. ಮತ್ತು ವಿಮದಾಃ = ಮದಮಾತ್ಸರ್ಯಾದಿ ಮನೋವಿಕಾರಗಳಿಲ್ಲದವರು. ಹಾಗೂ ಅಘಭಿದಂಘ್ರಿಜಲಾಃ = ಅವರ ಪಾದೋದಕವೇ ಪಾಪಿಗಳ ಪಾಪಗಳನ್ನು ತೊಡೆದುಹಾಕಬಲ್ಲದಾಗಿರುತ್ತದೆ. ಅಂತಹ ಸಾಧುಗಳು ಮತ್ತೆ ಏತಕ್ಕೆ ತೀರ್ಥಯಾತ್ರೆ ಮಾಡುವರೆಂದರೆ - ತೀರ್ಥಕ್ಷೇತ್ರಗಳಲ್ಲಿ ಬೇರೆ ಬೇರೆ ಸತ್ಪುರುಷರ ದರ್ಶನ ಸಂಲ್ಲಾಪ ಲಾಭ ಆಗುವುದೆಂಬ ಅಭಿಲಾಷೆಯಿರಬಹುದು. ಅಥವಾ, ನಿತ್ಯಸುಖೇ = ಆತ್ಮನಿ ತ್ವಯಿ = ನಿರಂತರಾನಂದಸ್ವರೂಪದ, ತಮ್ಮ ಪ್ರತ್ಯಗಾತ್ಮನಾದ ನಿನ್ನಲ್ಲಿ (ಪರಮಾತ್ಮನಲ್ಲಿ) ಯೇ ಸಕೃತ್ ಮನಃ ದಧತಿ = ಯಾರು ಒಮ್ಮೆಯಾದರೂ ಭಕ್ತಿ ಪ್ರೇಮನ್ನಿಡುವರೋ (ಪ್ರೇಮಾನಂದವನ್ನನುಭವಿಸಿರುವರೋ) ಅವರು. ಪುನಃ = ಮತ್ತೆ. ಪುರುಷಸಾರಹರಾವಸಥಾನ್ = ಮನುಷ್ಯನ ಧೈರ್ಯ ವೀರ್ಯ ಕೀರ್ತಿ ಪ್ರಜ್ಞೆ ಮುಂತಾದ ಮಹತ್ವಕ್ಕೆ ಲೋಪವನ್ನುಂಟುಮಾಡುವ ಮನೆ ಮಠಗಳನ್ನು , ನ ಉಪಾಸತೇ = ಆಶ್ರಯಿಸುವುದಿಲ್ಲ. ಸೇವಿಸುವ ಯೋಚನೆಯನ್ನೇ ಮಾಡುವುದಿಲ್ಲ.

ವಿಚಾರ ಕ್ರಮದಲ್ಲಿ ಮನನಾಂಶಗಳನ್ನು ಎತ್ತಿತೋರಿಸುತ್ತಾ ಈ ಶ್ಲೋಕದಿಂದ ಸ್ತುತಿಸುತ್ತಾರೆ.

ಸತ ಇದಮುತ್ಥಿತಂ ಸದಿತಿ ಚೇನ್ನನು ತರ್ಕಹತಂ
ವ್ಯಭಿಚರತಿ ಕ್ವಚ ಕ್ವಚ ಮೃಷಾ ನ ತಥೋಭಯಯುಕ್ ।
ವ್ಯವಹೃತಯೇ ವಿಕಲ್ಪ ಇಷಿತೋಽಂಧಪರಂಪರಯಾ
ಭ್ರಮಯತಿ ಭಾರತೀ ತ ಉರುವೃತ್ತಿಭಿರುಕ್ಥಜಡಾನ್ ॥ ೨೩ ॥

ಭಕ್ತಿ ಜ್ಞಾನ ವೈರಾಗ್ಯ ಪ್ರಸ್ಥಾನವಾದ ಭಾಗವತಧರ್ಮವು ಆತ್ಮೈಕ್ಯರೂಪವಾದ ಅದ್ವೈತ ಸಿದ್ಧಾನ್ತವನ್ನೇ ಗುರಿಯಾಗಿ ಉಳ್ಳದ್ದಾಗಿದೆ. ಇದೇ ವೇದಪ್ರತಿಪಾದ್ಯವೂ ಆಗಿದೆ. ಶ್ರುತಿಯು ಪರಮಾರ್ಥವನ್ನು ಅತದ್ವ್ಯಾವೃತ್ತಿ ಉಪಾಯದಿಂದ ಅಥವಾ ಭಾಗತ್ಯಾಗ

ಲಕ್ಷಣಾ ವೃತ್ತಿ ಎಂಬ ಉಪಾಯದಿಂದ ಬೋಧಿಸುತ್ತಾ ಅಪ್ರಮೇಯ ವಸ್ತುವಾದ ಆತ್ಮತತ್ತ್ವವನ್ನು ಪ್ರತಿಪಾದಿಸುವುದು. ಮನೋವಾಗಗೋಚರನಾದ, ಪುರುಷಮತಿಗೆ ವಿಷಯನಾಗದ, ನಿತ್ಯವಿಷಯಿ ಸ್ವರೂಪದ, ಪುರುಷನ ಪ್ರತ್ಯಗಾತ್ಮಾಭಿನ್ನನೂ ಆದ ಪರಮಾತ್ಮನನ್ನು ತಿಳಿಸಿಕೊಡುವುದೆಂದು ಒಪ್ಪಬೇಕು. ಹಾಗಲ್ಲದೆ, ಶ್ರುತಿವಾಕ್ಯಾರ್ಥ ನಿರ್ಣಯಕ್ಕೆ ಲೋಕವ್ಯವಹಾರದ ರೂಢಿಯನ್ನೇ ನಂಬಿಕೊಂಡು ಅಭಿಧಾವೃತ್ತಿಯಿಂದ ತಿಳಿಯುವ ವಾಚ್ಯಾರ್ಥವನ್ನೇ ಹಿಡಿದು ವಾಕ್ಯಾರ್ಥನಿರ್ಣಯಕ್ಕೆ ಹೊರಟರೆ ಎಲ್ಲಾ ಉಪದೇಶಗಳೂ ವ್ಯಾಕುಲವಾಗುವುವು. ತಾತ್ಪರ್ಯ ನಿಶ್ಚಯವೇ ವಾಕ್ಯಾರ್ಥಬೋಧಕ್ಕೆ ಪ್ರಧಾನವೆಂದು ಎಲ್ಲರೂ ಒಪ್ಪಿರುವುದು. ಆದ್ದರಿಂದ ತತ್ತ್ವಮಸೀತ್ಯಾದಿ ವಾಕ್ಯಗಳಿಗೆ ಷಡ್ವಿಧಲಿಂಗ ನ್ಯಾಯವನ್ನನುಸರಿಸಿ ಅಭೇದ ನಿಶ್ಚಯವಾಗುವಂತೆ ಲಕ್ಷಣಾ ವೃತ್ತಿಯನ್ನಾಶ್ರಯಿಸಬೇಕೆಂಬ ಅಭಿಪ್ರಾಯವನ್ನು ಸಮರ್ಥಿಸುತ್ತಾ, ಅಭಿಧಾವೃತ್ತಿಯ ಅವ್ಯವಸ್ಥೆಯನ್ನು ಯುಕ್ತಿಯಿಂದ ತೋರ್ಪಡಿಸುತ್ತಾ ಸ್ತುತಿಸುವ ಶ್ಲೋಕವಿದು.

ಪೂರ್ವಪಕ್ಷಿಯು ಹೇಳುತ್ತಾನೆ - ಇದಂ = ಈ ಪ್ರಪಂಚವು. ಸತಃ = ಸದ್ವಸ್ತುವಿನಿಂದ, ಉತ್ಥಿತಂ = ಉಂಟಾಗಿದೆ. ಆದ್ದರಿಂದ, ಸತ್ = ಇದು ಸದ್ವಸ್ತುವೇ, ಸತ್ಯವೇ ಆಗಿದೆ. ಹೀಗೆ ಈ ತರ್ಕದಿಂದ ಪ್ರಪಂಚವು ಮಿಥ್ಯಾ ಎಂದು ಹೇಳುವವರ ಮತವನ್ನು ತಳ್ಳಿಹಾಕಿದಂತಾಯಿತು ಎಂದು ಅವನ ಅಭಿಪ್ರಾಯ. ಸತ್ಯವಾದ ಮೃತ್ತಿನಿಂದ ಉಂಟಾದ ಘಟವೂ ಸತ್ಯವೇ ಎಂಬ ದೃಷ್ಟಾಂತವನ್ನಿಟ್ಟುಕೊಂಡು ಹೇಳಿದ ಮಾತು ಇದು. ಆದರೆ ಮೃತ್ತು ಸತ್ಯವೇ ಅಲ್ಲವೇ ಎಂಬುದನ್ನೇನೂ ವಿಚಾರಮಾಡದೇ ಹೇಳಿದ್ದದು. ಆದ್ದರಿಂದ ಈ ಮಾತು ಒಪ್ಪಿತವಾಗಲಾರದು. ಈ ಮತದ ಖಂಡನೆ - ಏನೆಂದರೆ - ಇತಿ ಚೇತ್ ನನು ತರ್ಕಹತಂ = ಹೀಗೆ ಹೇಳಿದುದು ತರ್ಕಕ್ಕೇ ವಿರುದ್ಧವಾಗಿರುತ್ತದೆ. ಇದು ತರ್ಕದಿಂದಲೇ ಹತವಾಗಿದೆ. ಆದ್ದರಿಂದ ಹೀಗೆ ಉಪದೇಶಮಾಡುವುದು ಯುಕ್ತಿಗೆ ಅನುಗುಣವಾಗಿಲ್ಲ. ಏಕೆಂದರೆ - ಸತಃ ಉತ್ಥಿತಂ ಎಂಬಲ್ಲಿ ಪಂಚಮೀ - ಅಪಾದಾನವಿಭಕ್ತಿಯಿಂದ ಕಾರ್ಯ ಕಾರಣಗಳಿಗೆ ಭೇದವೇ - ವೈಲಕ್ಷಣ್ಯವೇ ತಿಳಿಯುತ್ತಿದೆ ಮತ್ತು ಕಾರಣವಸ್ತು ಇರುತ್ತಿದ್ದು ಕಾರ್ಯವು ನಾಶಹೊಂದುವುದೆಂಬುದು ಅನುಭವಸಿದ್ಧವಾಗಿದೆ. ಹೀಗೆ ವೈಲಕ್ಷಣ್ಯವಿರುವುದರಿಂದ ಮೇಲೆ ಹೇಳಿದ ಅನುಮಾನಪ್ರಮಾಣದಿಂದ ಪ್ರಪಂಚಕ್ಕೆ ಸತ್ಯತ್ವವು ಸಿದ್ಧಿಸುವುದಿಲ್ಲ. ಕಾರ್ಯವು ಕಾರಣದ

ವಿಕಾರ ಮಾತ್ರ. ಕಾರಣವು ಮೂಲವಸ್ತು ಎಂಬಿಷ್ಟು ಅಂಶವನ್ನು ಎಲ್ಲಾ ವಾದಿಗಳೂ ಒಪ್ಪಿರುವುದು. ಅದಕ್ಕೆ ವಿರುದ್ಧವಾದ್ದರಿಂದ ಪೂರ್ವಪಕ್ಷಿಯು ಹೇಳುವುದು ತಪ್ಪು. ಸರಿಯಲ್ಲ. ಸತ್‌ಪದದ ವಾಚ್ಯಾರ್ಥಕ್ಕೆ ಪ್ರಾಧಾನ್ಯ ಕೊಟ್ಟುಕೊಂಡು ಹೇಳುವ ಅರ್ಥವು ಸರಿಯಲ್ಲ ಎಂದು ಆ ಮತವನ್ನು ಖಂಡಿಸಿದ ಹಾಗಾಯಿತು. ಮತ್ತೆ ತರ್ಕ ವಿರೋಧವನ್ನು ತೋರಿಸುತ್ತಾರೆ. ಕ್ವ ಚ ವ್ಯಭಿಚರತಿ = ತದುತ್ಪನ್ನತ್ವವೆಂಬ ಹೇತುವು ಕೆಲವು ಕಡೆ ವ್ಯಭಿಚಾರಿಯಾಗಿರುತ್ತದೆ. ಅವರು ಹೇಳಿರುವ ಹೇತುವು ಸಾಧ್ಯಾಭಾವವದ್ವೃತ್ತಿ ಎಂಬ ವ್ಯಭಿಚಾರ ದೋಷವುಳ್ಳದಾಗಿರುವುದರಿಂದ ಈ ಹೇತುವಿನಿಂದ ಪ್ರಮಾಜ್ಞಾನವುಂಟಾಗುವುದಿಲ್ಲ. ಹೇಗೆಂದರೆ - ಪುತ್ರಃ ಪಿತ್ರಾತ್ಮಕಃ ಪಿತುರುತ್ಪನ್ನತ್ವಾತ್. ಹೀಗೆಂಬ ಅನುಮಾನ ಪ್ರಯೋಗದಲ್ಲಿ ನೋಡಿ - ಮಗನು ತಂದೆಗೆ ಅಭಿನ್ನನಾಗಿದ್ದಾನೆ. ಏಕೆಂದರೆ - ತಂದೆಯಿಂದ ಹುಟ್ಟಿರುವುದರಿಂದ ಹೀಗೆಂಬ ಅನುಮಾನದಲ್ಲಿ ಪಿತೃವಿನಿಂದ ಪುತ್ರನು ಭಿನ್ನವಾಗಿರುವುದು ಮತ್ತು ಕಾರಣವಾದ ಪಿತೃವು ಗತಿಸಿದರೂ ಕಾರ್ಯಪುತ್ರನು ಇಲ್ಲಿರುವುದು ಪ್ರತ್ಯಕ್ಷಸಿದ್ಧವಾಗಿರುತ್ತದೆ. ಆದ್ದರಿಂದ ಇದು ವ್ಯಭಿಚಾರದೋಷವುಳ್ಳ ಹೇತು. ಈ ಅನುಮಾನದಿಂದ ಪ್ರಮಾನುಮಿತಿಯುಂಟಾಗುವುದಿಲ್ಲ. ಈಗ ಪೂರ್ವಪಕ್ಷಿಯು ಮತ್ತೆ ಹೇಳುತ್ತಾನೆ - ಪುತ್ರೋತ್ಪತ್ತಿಯಲ್ಲಿ ತಂದೆಯು ಉಪಾದಾನ ಕಾರಣವಾಗಿಲ್ಲ. ಕೇವಲ ನಿಮಿತ್ತವಾಗಿರುತ್ತಾನೆ. ನಾವು ಹೇಳಿದ ಅನುಮಾನದಲ್ಲಿ ಹೇತುವಿಗೆ ಉಪಾದಾನೋತ್ಪನ್ನತ್ವವೆಂಬ ವಿಶೇಷಣವನ್ನು ಸೇರಿಸಿದರೆ ಆಗ ವ್ಯಭಿಚಾರ ದೋಷ ಬರುವುದಿಲ್ಲ ಅಲ್ಲವೇ ! ಎಂದರೆ ಆಗಲೂ ದೋಷವು ತಪ್ಪುವುದಿಲ್ಲ. ಹೇಗೆಂದರೆ - ರಜ್ಜುಸರ್ಪಃ ರಜ್ಜ್ವಾತ್ಮಕಃ ರಜ್ಜೂಪಾದಾನೋತ್ಪನ್ನತ್ವಾತ್ ಎಂಬ ಅನುಮಾನ ಪ್ರಯೋಗದಲ್ಲಿ ಹಗ್ಗದ ಹಾವು ಹಗ್ಗದಿಂ ಅಭಿನ್ನವಾಗಿದೆ. ಹಗ್ಗವೆಂಬ ಉಪಾದಾನದಿಂದ ಉಂಟಾಗಿರುವುದರಿಂದ ಎಂಬ ಅರ್ಥವಾಗುವುದು. ಆಗಲೂ ವ್ಯಭಿಚಾರ ದೋಷ ಇದ್ದೇ ಇದೆ. ನೋಡಿ - ರಜ್ಜು ಸರ್ಪವು ಉಪಾದಾನವಾದ ರಜ್ಜುವಿನಿಂದಲೇ ಉಂಟಾಗುವುದು. ಆದರೆ ಆ ಹಾವು ಹಗ್ಗವೂ ಅಲ್ಲ. ಹಗ್ಗದಂತೆ ಸತ್ಯವೂ ಆಗಿರುವುದಿಲ್ಲ. ಮಿಥ್ಯೆಯೇ ಆಗಿರುತ್ತದೆ. ಅದು ಸತ್ಯವೇ ಆಗಿದ್ದರೆ ಕನಕದಿಂದ ಉಂಟಾದ ಕುಂಡಲಾದಿಗಳಂತೆ ಬಾಧೆಗೆ ಒಳಗಾಗಕೂಡದು. ಆದರೆ ಬಾಧಿತವಾಗುತ್ತಿದೆ. ಆದ್ದರಿಂದ ಹೇತುವು ವ್ಯಭಿಚಾರದೋಷ ಉಳ್ಳದ್ದೇ ಆಗಿದೆ. ಹೀಗೆಂಬ ಅಂಶವನ್ನು ಈ ಶ್ಲೋಕದಲ್ಲಿ, ಕ್ವ ಚ ಮೃಷಾ = ಕೆಲವು ಕಡೆ

ತದುತ್ಪನ್ನವಾಗಿದ್ದರೂ ಸತ್ಯವಸ್ತುವಾಗಿರುವುದಿಲ್ಲ. ಮಿಥ್ಯೆಯಾಗಿರುತ್ತದೆ ಎಂಬ ಮಾತಿನಿಂದ ತಿಳಿಸಿದೆ. ಹಾಗಾದರೆ ಹೀಗೆ ಹೇಳೋಣ ಎನ್ನುತ್ತಾನೆ ಮತ್ತೆ ಪೂರ್ವ ಪಕ್ಷೀ - ಉಭಯಯುಕ್ ನ ತಥಾ = ಎರಡೂ ಸೇರಿ ಕಾರ್ಯವಾಗಿದ್ದರೆ ಅಂದರೆ ಉಪಾದಾನವಸ್ತು ಮತ್ತು ಅವಿದ್ಯೆ ಎರಡೂ ಸೇರಿ ಕಾರ್ಯೋತ್ಪತ್ತಿ ಆಗಿದ್ದರೆ ಅಂತಹ ಕಾರ್ಯವು ಸತ್ಯವಾಗದೇ ಮಿಥ್ಯೆ ಆಗಿರುವುದು. ರಜ್ಜಸರ್ಪ ಎಂಬಲ್ಲಿ ಕಾರ್ಯವು ಈ ಎರಡೂ ಇರುವುದರಿಂದ ಸತ್ಯವಾಗಿಲ್ಲ ಎಂದು ವ್ಯಭಿಚಾರ ದೋಷಕ್ಕೆ ಗತಿ ತೋರಿಸಿದಹಾಗಾಯಿತು. ಅಂದರೆ ಕಾರಣಾಧಿಷ್ಠಾನಜ್ಞಾನವಿಲ್ಲದೇ ಕಾರ್ಯೋದ್ಭವ ಎಂದರೆ ಪ್ರಕೃತ ಪ್ರಪಂಚಕಾರ್ಯೋದ್ಭವ ಸ್ಥಳದಲ್ಲೂ ಸಮವೇ ಆಗಿದೆ. ಇದು ಕಾರಣಾಧಿಷ್ಠಾನವಾದ ಬ್ರಹ್ಮದ ಅಜ್ಞಾನದಿಂದಲೇ ಪ್ರಪಂಚವುಂಟಾಗಿರುವುದು. ಆದ್ದರಿಂದ ಸದುಪಾದಾನವಿದ್ದರೂ ಕಾರ್ಯಪ್ರಪಂಚವು ಸತ್ಯವೆಂದು ಸಿದ್ಧವಾಗುವುದಿಲ್ಲ. ಅಂದಾಗ ಕಾರ್ಯವು ಅಧಿಷ್ಠಾನದಲ್ಲಿ - ಕಾರಣದಲ್ಲಿ ಕಲ್ಪಿತವಾಗಿರುತ್ತದೆ. ವಿಕಾರಮಾತ್ರವಾಗಿರುತ್ತದೆ ಎಂದು ಎಲ್ಲಾ ವಾದಿಗಳೂ ಒಪ್ಪಬೇಕು. ಕಾರ್ಯವು ಆರೋಪಿತವಾಗಿರುತ್ತದೆ ಎಂಬುದಿಷ್ಟು ಮಾತ್ರ ನಿಜ. ನೀವು ಹೇಳುವಂತೆ ಪ್ರಪಂಚವು ಮಿಥ್ಯೆ ಎಂದೇ ಆದರೆ, ಇದೇನಿದು ಪ್ರಪಂಚದಲ್ಲಿ ಎಲ್ಲಾ ಜನರು ಸತ್ಯವೆಂದೇ ತಿಳಿದುಕೊಂಡು ವ್ಯವಹರಿಸುತ್ತಿರುವವರಲ್ಲಾ! ಇದು ಹೇಗೆ ! ಎಂದರೆ ಅದಕ್ಕೆ ಹೇಳುತ್ತಾರೆ - ಅಂಧ ಪರಂಪರಯಾ ವ್ಯವಹೃತಯೇ ವಿಕಲ್ಪಃ ಇಷಿತಃ = ತಲತಲಾಂತರದಿಂದ ಭ್ರಾಂತಿ ಮೂಲಕವಾಗಿಯೇ ನಡೆಯುತ್ತಿರುವ ಭೋಗ ಲಾಲಸೆಯ ವ್ಯವಹಾರ ಸಿದ್ಧಿಗೋಸ್ಕರ ಕಲ್ಪಿತವಾದ ಆರೋಪವು ಜನರಿಗೆ ಒಪ್ಪಿತವಾಗಿಬಿಟ್ಟಿದೆ. ಇಷ್ಟವಾಗಿದೆ. ಅಂದರೆ ಭ್ರಮಮೂಲಕವಾದ ವ್ಯವಹಾರವೇ ಒಗ್ಗಿಬಿಟ್ಟಿದೆ. ವಿಚಾರ ಮಾಡಿಕೊಳ್ಳದೆ ಸತ್ಯ ಮಿಥ್ಯೆಗಳೆರಡನ್ನೂ ಬೆರೆಸಿಕೊಂಡು, ವಿವೇಕವಿಲ್ಲದೇ ವ್ಯವಹಾರವು ನಡೆಯುತ್ತಿರುವುದು. ಆದ್ದರಿಂದ ವ್ಯವಹಾರವಾಗಲಿ, ಪ್ರಪಂಚವಾಗಲಿ ಸತ್ಯಪರಮಾರ್ಥ ಎಂದಾಗುವುದಿಲ್ಲ. ಹಾಗಾದರೆ ವ್ಯವಹಾರದ ಕರ್ತೃತ್ವ ಭೋಕ್ತೃತ್ವಾದಿಗಳನ್ನೇ - ಅಧಿಕಾರವನ್ನೇ ಅಧಿಕರಿಸಿ ವೇದವೇ ಕರ್ಮವಿಧಾನ ಮಾಡಿರುವುದು ಹೇಗೆ ? ಎಂದರೆ, ಹೇ ಭಗವನ್, ತೇ ಭಾರತೀ = ನಿನ್ನ ವಾಣೀರೂಪವೇದವು, ಉರುವೃತ್ತಿಭಿಃ = ಅಭಿಧಾ, ಗೌಣೀ, ಲಕ್ಷಣಾ ಎಂಬ ಬೇರೆ ಬೇರೆ ಶಬ್ದ ಶಕ್ತಿಗ್ರಳಿಂದ. ಉಕ್ಥಜಡಾನ್ = ಕಾಮಕರ್ಮಾದಿಗಳಲ್ಲಿ ವಿಶೇಷ ಅಭಿನಿವೇಶವುಳ್ಳ ಜನರನ್ನು, ಅಂದರೆ ವೇದತಾತ್ಪರ್ಯವನ್ನರಿಯದ ಮಂದ ಪ್ರಜ್ಞರನ್ನು,

ಭ್ರಮಯತಿ = ಭ್ರಾಂತಿಪಡುವಂತೆ ಮಾಡುತ್ತದೆ. ಕರ್ಮಠರನ್ನು ಕರ್ಮದಲ್ಲೂ, ಕರ್ಮಫಲದಲ್ಲೂ ಮೋಹಪಟ್ಟುಕೊಂಡು ಮೈಮರೆಯುವಂತೆ ಮಾಡುವುದು. ಜನರು ಅಂಧಶ್ರದ್ಧೆಯುಳ್ಳವರಾಗಿರುತ್ತಾರೆಂದು ತಾತ್ಪರ್ಯ. (ಕುರುಡುನಂಬಿಕೆ)

ಏವಂಚ ಈ ಪ್ರಪಂಚದ ಸತ್ಯತ್ವಕ್ಕೆ ಯುಕ್ತಿ - ಪ್ರಮಾಣ ಇಲ್ಲದ್ದರಿಂದ ಈ ಜಗತ್ತು ಸತ್ಯವೆಂದು ನಂಬುವಂತಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಅಸತ್ಯ-ಮಿಥ್ಯಾ ಎಂಬ ವಿಷಯಕ್ಕೆ ಪ್ರಮಾಣವೇ ಇರುವುದೆಂದು ನಿರೂಪಿಸುತ್ತಾ ಸ್ತುತಿಸುವರು -

ನಯದಿದಮಗ್ರ ಆಸ ನ ಭವಿಷ್ಯದತೋ ನಿಧನಾದ್
ಅನುಮಿತಮಂತರಾ ತ್ವಯಿ ವಿಭಾತಿ ಮೃಷೈಕರಸೇ ।
ಅತ ಉಪಮೀಯತೇ ದ್ರವಿಣಜಾತಿವಿಕಲ್ಪಪಥೈಃ
ವಿತಥಮನೋವಿಲಾಸಮೃತವಯಂತ್ಯಬುಧಾಃ ॥ ೨೪ ॥

ಇದಂ = ಈ ಪ್ರಪಂಚವು ವಿಶ್ವಸಂಸಾರವು. ಅಗ್ರೇ - ಸೃಷ್ಟಿಗೆ ಪೂರ್ವದಲ್ಲಿ ಹಾಗೆಯೇ ಜಾಗ್ರದವಸ್ಥೆಗೆ ಮೊದಲು ನಿದ್ರೆಯಲ್ಲಿ, ಯತ್ - ಯಾವ ಕಾರಣದಿಂದ. ನ ಆಸ = ಇರಲೇ ಇಲ್ಲವೋ, ಮತ್ತೆ ಅತೋನಿಧನಾತ್ = ಇನ್ನು ಮುಂದೆ ಪ್ರಲಯೋತ್ತರ, ಹಾಗೆಯೇ ಜಾಗ್ರತ್ ಸ್ವಪ್ನಗಳ ಮುಂದಿನ ಅವಸ್ಥೆ ಸುಷುಪ್ತಿಯಲ್ಲಿ. ನ ಭವಿಷ್ಯತ್ = ಇರುವುದೇ ಇಲ್ಲವೋ ಅಂತರಾ = ಈ ಮಧ್ಯೆ ವರ್ತಮಾನಕಾಲದ ಜಾಗ್ರದವಸ್ಥೆಯಲ್ಲಿ. ಏಕರಸೇ ತ್ವಯಿ - ಅಖಂಡ ಜ್ಞಾನಾನಂದಾನುಭವಸ್ವರೂಪದ ನಿನ್ನಲ್ಲಿ( ಆತ್ಮನಲ್ಲಿ) ಮೃಷಾ ವಿಭಾತಿ = ಸತ್ಯವಾಗಿರುವಂತೆ ಸುಳ್ಳು ಸುಳ್ಳೇ ತೋರುತ್ತಿರುವುದು ಎಂದು. ಅನುಮಿತಂ = ಅನುಮಾನ ಪ್ರಮಾಣದಿಂದ ನಿರ್ಣಯ ಮಾಡಿಕೊಳ್ಳಬೇಕು. ಅಂದರೆ ನಿತ್ಯಸಾಕ್ಷೀ ಆತ್ಮನಲ್ಲಿ - ಅಧಿಷ್ಠಾನದಲ್ಲಿ ಮಧ್ಯೆ ಸ್ವಲ್ಪಕಾಲ ತೋರಿಕೊಂಡು ಮತ್ತೆ ಅಡಗಿಹೋಗುವಂತಹುದಾಗಿದೆ. ಹೀಗೆ ಆಗಂತುಕವೂ ಅಶಾಶ್ವತವೂ ಆಗಿರುವುದರಿಂದ ಪ್ರಪಂಚವು ಕನಸಿನಂತೆ ಹುಸಿಯಾಗಿದೆ. ಇಂತಿರುವುದನ್ನೇ ಮಿಥ್ಯಾ ಎನ್ನುವುದು. ಅತಃ - ಆದ್ದರಿಂದ, ಶ್ರುತಿಯು, ದ್ರವಿಣ ಜಾತಿ ವಿಕಲ್ಪಪಥೈಃ - ದ್ರವ್ಯಜಾತಿಗೆ ಸೇರಿದ ಮಣ್ಣು ಲೋಹ ಮೊದಲಾದವುಗಳ ಕಾರ್ಯರೂಪ ವಿಕಾರಗಳಾದ ಘಟ. ಕುಂಡಲ ಮುಂತಾದ ಪ್ರಕಾರಗಳೊಂದಿಗೆ. ಉಪಮೀಯತೇ = ಹೋಲಿಕೆ ಕೊಟ್ಟು ನಿರೂಪಿಸಿದೆ.

ಕಾರ್ಯಕಾರಣಗಳಿಗೆ ಭೇದವಿರುವುದಿಲ್ಲವಾದ್ದರಿಂದ ಅಭೇದಗ್ರಹಣೆಯಾಗಲೆಂದೇ ಬ್ರಹ್ಮ ಜಗತ್ತುಗಳಿಗೆ ಕಾರ್ಯಕಾರಣಭಾವವನ್ನು ಪ್ರತಿಪಾದಿಸಿದೆ. ಇದರಿಂದ ತಿಳಿಯುವುದೇನೆಂದರೆ - ಘಟ ಶರಾವಾದಿ ವಿಕಾರಗಳು ಕೇವಲ ನಾಮರೂಪಭೇದದಿಂದ ತೋರುವ ಕೇವಲ ಮಣ್ಣೇ ಆಗಿರುವುದು ಹೇಗೋ ಹಾಗೆಯೇ ನಾಮರೂಪಭೇದವುಳ್ಳ ಜಗತ್ತು ಹಾಗೂ ಮಹದಹಂಕಾರಾದಿ ನಾಮರೂಪಗಳಿಂದ ತಿಳಿದುಬರುತ್ತಿರುವ ಆಧ್ಯಾತ್ಮಿಕ ಪ್ರಮೇಯಗಳೂ ಕೂಡ ಅಂದರೆ ದೃಶ್ಯವಾದ ಸಕಲವೂ ಸನ್ಮಯವೇ, ಕೇವಲ ಬ್ರಹ್ಮವೇ - ಆತ್ಮವೇ ಎಂದು ತಿಳಿಯುಬೇಕು. ಈ ಪರಮಾರ್ಥವನ್ನು ಬೋಧಿಸುವುದಕ್ಕಾಗಿಯೇ ಶ್ರುತಿಯು ದೃಷ್ಟಾಂತಕೊಟ್ಟು ನಿರೂಪಣೆ ಮಾಡಿದೆ. ಏವಂಚ ಪ್ರಪಂಚದ ಸತ್ಯತ್ವಕ್ಕೆ ಪ್ರಮಾಣವೇನೂ ಇಲ್ಲದ್ದರಿಂದಲೂ, ಅಸತ್ಯತ್ವಕ್ಕೇ ಪ್ರಮಾಣವು ಇರುವುದರಿಂದಲೂ ನಿಶ್ಚಯವಾಗುವುದೇನೆಂದರೆ - ಅಬುಧಾಃ = ಅಜ್ಞಾನಿಗಳು, ಅವಿವೇಕಿಗಳು ಮಾತ್ರವೇ. ವಿತಥಮನೋವಿಲಾಸಂ ಋತಂ ಇತಿ ಅವಯಂತಿ = ವ್ಯರ್ಥವಾದ ಮತ್ತು ಕೇವಲ ಮನಸ್ಸಿನ ಕಲ್ಪನೆಯಾದ ಪ್ರಪಂಚವನ್ನು ಹಾಗೂ ಪ್ರಮಾತೃವಿನ ಸಂಸಾರ ವ್ಯವಹಾರವನ್ನು ಸತ್ಯವೆಂದು ಬಗೆಯುತ್ತಾರೆ. ನಂಬಿಕೊಂಡಿರುತ್ತಾರೆ.

ಈ ನಿರೂಪಣೆಯಿಂದ ಕಂಡುಕೊಳ್ಳಬೇಕಾದ್ದೇನೆಂದರೆ - ಪ್ರಪಂಚವು ಇದೆ ತೋರುತ್ತದೆ ಎನ್ನುವಾಗ ಈ ಇರುವಿಕೆ ಮತ್ತು ತೋರುವಿಕೆ ಬ್ರಹ್ಮಾತ್ಮನದಾಗಿದೆ. ಅದರ ನಾಮ ಮತ್ತು ರೂಪ ಆಕಾರಗಳು ಮಾಯಿಕವಾಗಿರುವುದರಿಂದ ಹುಸಿಯಾಗಿರುತ್ತವೆ. ಚಿತ್ರವಿಚಿತ್ರವುಳ್ಳ ಪ್ರಪಂಚವು ಕಾರ್ಯ ಆಗಿದ್ದು ಇದಕ್ಕೆ ಕಾರಣವು ಬ್ರಹ್ಮವೇ ಆಗಿರುವುದೆಂದು ಶ್ರುತಿ ಯುಕ್ತಿ ಅನುಭವ ಪ್ರಮಾಣಗಳಿಂದ ನಿಶ್ಚಯವಾಗುತ್ತದೆ. ಪ್ರಪಂಚವು ಬ್ರಹ್ಮಾತ್ಮನಲ್ಲೇ ತೋರುತ್ತದೆ ಆದರೆ ಹುಸಿಯಾಗಿದೆ. ಕನಸಿನಂತೆ ಎಂದು ನಿಶ್ಚಯಿಸಿಕೊಳ್ಳಬೇಕು.

ಈಗ ಮುಂದಿನ ಶ್ಲೋಕಕ್ಕೆ ಅವತರಣಿಕೆ ಏನೆಂದರೆ - ಏಕ ಅಸಂಗ ಚಿದ್ರೂಪ ಆತ್ಮನಿಗೆ ಎಂದೂ ಹೇಗೂ ಬೇರೆ ಪದಾರ್ಥಗಳ ಸಂಬಂಧವೇ ಉಂಟಾಗುವುದಿಲ್ಲ ಎಂದಿರಬೇಕಾದರೆ ಜೀವಾತ್ಮನಿಗೆ ಮಾತ್ರ ಸಂಸಾರಬಂಧನವಿರುವುದೆಂಬುದೂ, ಮತ್ತೆ ಈಶ್ವರನು ನಿತ್ಯಮುಕ್ತ ಎನ್ನುವುದೂ ಹೇಗೆ ಸಮಂಜಸವಾಗುವುದು? ಮತ್ತು ಆತ್ಮನು ಒಬ್ಬನೇ ಎಂದಿರುವುದರಿಂದ ಮೋಕ್ಷಸಾಧನೋಪದೇಶಗಳು ವ್ಯರ್ಥ ಎಂದಾಗುವುದಿಲ್ಲವೇ? ಎಂಬೀ ಆಕ್ಷೇಪ. ಸಂದೇಹಗಳಿಗೆ ಜೀವೇಶ್ವರ ವ್ಯವಸ್ಥೆಯನ್ನು

ತಿಳಿಸುತ್ತಾ ಉತ್ತರವಾಗಿ ಸಮಾಧಾನ ಹೇಳುವ ಶ್ಲೋಕವಿದು. ತತ್ತ್ವಜ್ಞಾನವಿಲ್ಲದ ಮನುಷ್ಯನು ಸ್ವಾಭಾವಿಕವಾಗಿ ಅಂದರೆ ನೈಸರ್ಗಿಕವಾಗಿ ಸಂಸಾರವನ್ನೂ, ಆತ್ಮಭೇದವನ್ನೂ ಕಲ್ಪನೆಮಾಡಿಕೊಂಡಿರುತ್ತಾನೆ. ಅಲ್ಲವೇ! ಆ ಕಲ್ಪನೆಯನ್ನು ಅನುವಾದಿಸಿಕೊಂಡು ಆತ್ಮೈಕತ್ವಗ್ರಹಣೆಗೋಸ್ಕರವೇ ಶ್ರುತಿಗಳು ಬದ್ಧಮುಕ್ತ ವ್ಯವಸ್ಥೆಯನ್ನು ಸಮರ್ಥಿಸುತ್ತಾ ಸ್ತುತಿಸುತ್ತವೆ.

ಸ ಯದಜಯಾ ತ್ವಜಾಮನುಶಯೀತ ಗುಣಾಂಶ್ಚ ಜುಷನ್
ಭಜತಿ ಸರೂಪತಾಂ ತದನು ಮೃತ್ಯುಮಪೇತಭಗಃ ।
ತ್ವಮುತ ಜಹಾಸಿ ತಾಮಹಿರಿವ ತ್ವಚಮಾತ್ತಭಗೋ
ಮಹಸಿ ಮಹೀಯಸೇಽಷ್ಟಗುಣಿತೇಽಪರಿಮೇಯಭಗಃ ॥೨೫ ॥

ಸಃ = ಚೇತನಾತ್ಮನು. ಯತ್ = ಯಾವಾಗ. ಅಜಯಾ = ಅಜ್ಞಾನ ಮತ್ತು ಮಾಯಾಮೋಹದಿಂದ. ಗುಣಾನ್‌ಚಜುಷನ್ = ಪ್ರಕೃತಿವಿಕಾರಗಳಾದ ಶಬ್ದಾದಿ ವಿಷಯುಗಳನ್ನು ಆಸಕ್ತಿಯಿಂದ ಸೇವಿಸುತ್ತಾ. ಅಜಾಂ ಅನುಶಯೀತ = ಮಾಯಾ-ಅವಿದ್ಯಾವಿಶಿಷ್ಟನಾಗಿ ಇದ್ದುಕೊಂಡಿರುವನೋ. ತದನು = ಆಗಲೇ, ಸರೂಪತಾಂ ಭಜತಿ = ಅವನು ತಾದ್ರೂಪ್ಯವನ್ನೇ ಹೊಂದಿರುತ್ತಾನೆ. ಅಂದರೆ ಪ್ರಾಕೃತಪದಾರ್ಥದಂತೆಯೇ ಆಗಿರುತ್ತಾನೆ. ಉಪಾಧಿತಾದಾತ್ಮ್ಯದಿಂದ ಪರಿಚ್ಛಿನ್ನ, ವಿಕಾರಿ, ಗುಣಕ್ರಿಯಾವಿಶಿಷ್ಟ ಎಂದಾಗಿರುತ್ತಾನೆ. ಹಾಗೂ ಅಪೇತಭಗಃ = ತನ್ನ ಸ್ವಾಭಾವಿಕ ಮಹತ್ವನ್ನು ಕಳೆದುಕೊಂಡವನಾಗಿರುತ್ತಾನೆ. ಮೃತ್ಯುಂ ಚ ಭಜತಿ = ಮುಪ್ಪು ಮರಣಾದಿ ಅನರ್ಥವನ್ನು ಹೊಂದುವನು. ಇದೇ ಜೀವಾತ್ಮನ ಸ್ಥಿತಿಯು. ಅಜಾಂ ಅನುಶಯೀತ ಎಂಬುದೇ ಆತ್ಮನಿಗೆ ಜೀವವ್ಯವಸ್ಥೆ - ಲಕ್ಷಣವಾಗಿದೆ. ಹಾಗಿಲ್ಲದೇ, ಈಶ್ವರನ ಲಕ್ಷಣವೇನೆಂದರೆ - ಆತ್ತಭಗಃ = ಸರ್ವದಾ ಸ್ವಯಂಸಿದ್ಧ ಜ್ಞಾನಾನಂದಾದ್ಯೈಶ್ವರ್ಯವುಳ್ಳವನೂ ಸ್ವರೂಪಾವರಣವಿಲ್ಲದವನೂ ಆದ. ತ್ವಂ ಉತ = ಪರಮಾತ್ಮನು ನೀನಾದರೋ, ತಾಂ = ಆ ಉಪಾಧಿಯಾದ ಮಾಯೆಯನ್ನು, ಅಹಿಃ ತ್ವಚಂ ಇವ = ಹಾವು ಕಳೆಚಲು ಬಂದಿರುವ ಪರೆಯನ್ನು ಹೇಗೋ ಹಾಗೆ. ಜಹಾಸಿ = ತ್ಯಜಿಸಿರುವೆ. ಹಾವಿಗೆ ತನ್ನ ಪರೆಯಲ್ಲಿ ತಾನು ಎಂಬ ಅಭಿಮಾನವಿರುವುದಿಲ್ಲ, ಹಾಗೆಯೇ ಈಶ್ವರನಿಗೆ

ಮಾಯೋಪಾಧಿಯಲ್ಲಿ ಅಭಿಮಾನವಿರುವುದಿಲ್ಲ. ಅಂತೆಯೇ ಆವರಣ ವಿಕ್ಷೇಪಾದಿಗಳೂ ಇರುವುದಿಲ್ಲ. ಆದ್ದರಿಂದ ಆತ್ತಭಗಃ = ಎಂಬುದೇ ಈಶ್ವರ ಲಕ್ಷಣವಾಗಿದೆ. ಹೇ ಭಗವನ್, ನೀನು, ಅಪರಿಮೇಯಭಗಃ = ಪರಿಚ್ಛಿನ್ನತ್ವಾದಿ ಹೀನಭಾವವಿಲ್ಲದ ನಿರತಿಶಯಾನಂದಾದಿ ಕಲ್ಯಾಣಗುಣಪರಿಪೂರ್ಣನಾಗಿದ್ದು. ಅಷ್ಟಗುಣಿತೇ = ಅಣಿಮಾದಿ ಅಷ್ಟಸಿದ್ಧಿರೂಪದ. ಮಹಸಿ = ಜ್ಞಾನಾನಂದೈಶ್ವರ್ಯಪ್ರಕಾಶದಲ್ಲಿ ಮಹೀಯಸೇ = ಉತ್ಕರ್ಷಸ್ವರೂಪ (ಸ್ವರೂಪ) ಪ್ರಕಾಶ ಸ್ಥಿತಿಯಲ್ಲೇ ಇರುತ್ತೀಯೆ ಎಂದು ಸ್ತುತಿಸಲಾಗಿದೆ.

ತತ್ತ್ವಜ್ಞಾನದಿಂದ ಯಾರು ಮುಕ್ತಿಪಡೆಯುವನೋ ಅವನೂ ಅದೇ ಸ್ಥಿತಿಯನ್ನು ಪಡೆದುಕೊಳ್ಳುವನು. ಆತ್ಮಜ್ಞಾನವಿಲ್ಲದ ಮನುಷ್ಯನು ದೇಹೇಂದ್ರಿಯಾದಿ ಪ್ರಕೃತಿ ವಿಕಾರಗಳಲ್ಲಿ ತನ್ನ ಚೈತನ್ಯ ಸ್ವಭಾವವನ್ನು ಆರೋಪಿಸಿಕೊಂಡು, ಅನೃತ ಜಡ ದುಃಖ ರೂಪದ ದೇಹಾದಿಗಳಲ್ಲಿ ನಾನು ತಾನು ಎಂದು ಅಭಿಮಾನಿಸಿಕೊಂಡು ದೇಹಾದಿವಿಶಿಷ್ಟನಾಗಿರುವವನೇ ತಾನು ಎಂದು ತಿಳಿದುಕೊಂಡಿರುತ್ತಾನೆ. ಅವಿದ್ಯಾ ಮೋಹನಿದ್ರೆಯಲ್ಲಿರುತ್ತಾನೆ. ಜಗತ್ಸ್ವಪ್ನವನ್ನು ಕಾಣುತ್ತಿರುತ್ತಾನೆ. ಅಂತಹ ಜೀವನನ್ನು ಕುರಿತು ನಗಾರಿಬಾರಿಸುವಂತೆ ಶ್ರುತಿಗಳು ಹೇಳುತ್ತವೆ - ಅಯ್ಯಾ, ಮೋಹವನ್ನು ಬಿಡು, ದೇಹಾತ್ಮಕನು ನೀನಲ್ಲ. ದೇಹಾದಿಗಳು ಕೇವಲ ಉಪಾಧಿ, ಅವು ನಿನ್ನ ಸ್ವರೂಪದಲ್ಲಿ ಸೇರಿಲ್ಲ. ಅವು ಪ್ರಕೃತಿ ಪರಿಣಾಮ ವಿಕಾರಗಳು. ಅಶಾಶ್ವತ - ಮಿಥ್ಯಾ ಆಗಿರತಕ್ಕವುಗಳು. ಅವು ಬೇರೆ, ನೀನು ಬೇರೆಯೇ, ಪರಸ್ಪರ ಆರೋಪ ಮಾಡಿಕೊಳ್ಳುವ ದುರಭ್ಯಾಸವನ್ನು ಬಿಡು. ನೀನು ಶುದ್ಧಪರಮಾನಂದಚೈತನ್ಯನು. ಚೇತನಾತ್ಮನೊಬ್ಬನೇ ಇರತಕ್ಕವನು. ಹೀಗೆಂದು ಸಾರಿ ಹೇಳುವುವು. ತಿಳಿಸಿಕೊಡುವುವು. ಈ ಉಪದೇಶವನ್ನು ಗ್ರಹಿಸಿಕೊಂಡು ಮನುಷ್ಯನು ಎಚ್ಚತ್ತುಕೊಳ್ಳುವನು. ಹೀಗೆ ಉಪದೇಶವು ಸಾರ್ಥಕವಾಗಿದೆ. ಪರಮಾರ್ಥಜ್ಞಾನ ಮಾಡಿಕೊಂಡರೆ ಮನುಷ್ಯನು ಕೃತಕೃತ್ಯನಾಗುವನು. ಮುಕ್ತನಾಗುವನು. ಯಜ್ಞ, ದಾನ, ತಪಸ್ಸು ಇವುಗಳಿಂದ ಪಾಪಪರಿಹಾರ, ಸ್ವರ್ಗಾದಿಲೋಕಪ್ರಾಪ್ತಿ ಮುಂತಾದ ಫಲ ದೊರೆಯಬಹುದು. ಅವುಗಳಿಂದ ಮುಕ್ತಿ ದೊರೆಯುವುದಿಲ್ಲ. ಅಂತು ಈ ಉಪದೇಶದ ಪ್ರಕಾರ ಏಕಾತ್ಮನಲ್ಲೇ ಸಂಸಾರದಶೆ ಮತ್ತು ಸಂಸಾರತೀತ ಮುಕ್ತಸ್ಥಿತಿ ಎಂಬ ವ್ಯವಸ್ಥೆಯು ನಿಶ್ಚಿತವಾಗುವುದು. ಜ್ಞಾನಾದೇವ ಹಿ ಕೈವಲ್ಯಂ ಎಂಬುದೇ ವೇದಸಿದ್ಧಾನ್ತವು.

ಮನುಷ್ಯನು ಆಲಸ್ಯ ಭ್ರಮೆ ಪ್ರಮಾದಾದಿಗಳನ್ನು ಬಿಟ್ಟು, ದರ್ಪ, ಡಂಭ, ವಂಚನೆಗಳಿಲ್ಲದೇ ಈವರೆಗೆ ನಿರೂಪಿಸಿರುವ ಪ್ರಕಾರ, ಭಗವದ್ಭಕ್ತಿಪೂರ್ವಕವಾಗಿ ವಿಚಾರ - ಅಭ್ಯಾಸ, ಅನುಷ್ಠಾನ ಮಾಡಿಕೊಂಡಿರಬೇಕು. ಈ ರೀತಿ ಸಾಧನೆಯಿಲ್ಲದಿದ್ದರೆ ಪರಮಪುರುಷಾರ್ಥ ಪ್ರಾಪ್ತಿಯಾಗದೆಂದು ಹೇಳುತ್ತಾ ಸ್ತುತಿಸುತ್ತಾರೆ -

ಯದಿ ನ ಸಮುದ್ಧರಂತಿ ಯತಯೋ ಹೃದಿ ಕಾಮಜಟಾಃ
ದುರಧಿಗಮೋಽಸತಾಂ ಹೃದಿಗತೋಽಸ್ಮೃತಕಂಠಮಣಿಃ ।
ಅಸುತೃಪಯೋಗಿನಾಮುಭಯತೋಽಪ್ಯಸುಖಂ ಭಗವನ್
ಅನಪಗತಾಂತಕಾದನಧಿರೂಢಪದಾದ್ಭವತಃ ॥೨೬ ॥

ಹೇ ಭಗವನ್ = ಹೇ ಪರಮೇಶ್ವರ, ಯತಯಃ = ಸಾಧಕರಾದ ಯೋಗಿಗಳಾಗಲೀ ಸಂನ್ಯಾಸಿಗಳಾಗಲಿ. ಹೃದಿ = ತಮ್ಮ ಹೃದಯ - ಮನಸ್ಸಿನಲ್ಲಿ ಗಂಟಾಗಿ ಅಂಟಿಕೊಂಡಿರುವ. ಕಾಮಜಟಾಃ = ಆಲದಮರದ ಬಿಳಿಲು ಬೇರುಗಳಂತೆ ಹೆಣೆದುಕೊಂಡಿರುವ ಕಾಮ ಕರ್ಮ ಆಶೋತ್ತರಗಳನ್ನು, ಯದಿ ನ ಸಮುದ್ಧರಂತಿ = ಬೇರುಸಹಿತ ಕಿತ್ತು ಬಿಸಾಡದಿದ್ದರೆ. ಅಸತಾಂ = ಅಂತಹ ಕುಯೋಗಿ ಕೃಪಣರಿಗೆ. ಹೃದಿಗತಃ = ಅವರ ಹೃದಯಮಂದಿರದಲ್ಲೇ ಇರುವ ನೀನು ಪರಮಾತ್ಮನು. ಅಸ್ಮೃತಕಂಠಮಣಿಃ = ತಾವು ಕುತ್ತಿಗೆಯಲ್ಲಿ ಧರಿಸಿದ ರತ್ನವನ್ನು ಮರೆತು, ರತ್ನವು ಕಳೆದುಹೋಗಿದೆ ಎಂದುಕೊಂಡು ಗೋಳಾಡುವ, ಹುಡುಕಾಡುತ್ತಿರುವ ಮೂಢರಿಗೆ ಎಲ್ಲಿ ಹುಡುಕಿದರೂ ರತ್ನವು ಹೇಗೆ ದೊರೆಯುವುದಿಲ್ಲವೋ ಹಾಗೆಯೇ, ದುರಧಿಗಮಃ = ನೀನು ದೊರೆಯತಕ್ಕವನಲ್ಲ. ಅಸುತೃಪಯೋಗಿನಾಂ = ದೇಹೇಂದ್ರಿಯ ಪ್ರಾಣಾದಿಗಳ ಪಾಲನೆ ಪೋಷಣೆ ಲಾಲಸೆಗಳಲ್ಲೇ ನಿರತರಾದ ಕಾಮೀ ಕುಯೋಗಿಗಳಿಗೆ. ಉಭಯತಃ ಅಪಿ = ಇಹಲೋಕ ಪರಲೋಕಗಳೆರೆಡರಲ್ಲೂ. ಅಸುಖಂ = ಕೇವಲ ದುಃಖಪ್ರಾಪ್ತಿಯೇ ಸರಿ. (ಲೋಕ ರೂಢಿಯಂತೆ ವ್ಯವಹಾರ ಕರ್ಮಾದಿಗಳನ್ನು ಮಾಡದಿರುವುದರಿಂದ ಇಲ್ಲಿ ಸುಖವಿಲ್ಲ. ಧರ್ಮಕರ್ಮಗಳನ್ನು ಮಾಡಿ ಪುಣ್ಯಸಂಪಾದನೆ ಮಾಡದಿರುವುದರಿಂದ ಪರಲೋಕದಲ್ಲೂ ಸುಖವಿಲ್ಲ.) ಮತ್ತೆ ಹಾಗೆಯೇ ಅನಪಗತಾಂತಕಾತ್ = ಮೃತ್ಯುವು ಅವರನ್ನು ಬಿಡುವುದಿಲ್ಲ. ಮತ್ತು ಮೃತ್ಯುಪರಿವಾರವಾದ ಆಧಿವ್ಯಾಧಿಗಳೂ

ಬಿಟ್ಟುಹೋಗುವುದಿಲ್ಲ. ಈ ಕಾರಣದಿಂದಲೂ ಮತ್ತು ಭವತಃ ಅನಧಿರೂಢಪದಾತ್ = ನಿನ್ನ ಪರಂಧಾಮವನ್ನು ಏರಿರುವುದಿಲ್ಲ. ಈ ಕಾರಣದಿಂದಲೂ. ಕುಯೋಗಿಗಳಿಗೆ ಸುಖಶಾಂತಿ ಎಂಬುದು ಇರುವುದಿಲ್ಲ ಮತ್ತು ಈಶ್ವರಕೋಪಕ್ಕೂ ಗುರಿಯಾಗುತ್ತಾರಾದ್ದರಿಂದ ಆ ಉಭಯಭ್ರಷ್ಟರು ನಾನಾ ಭಯಗಳಿಗೆ ಬಲಿಯಾಗುತ್ತಾರೆ. ಮತ್ತೆ ಯಾರು ಭಯಗಳಿಗೆ ತುತ್ತಾಗುವುದಿಲ್ಲವೆಂದರೆ - ಅಂತಹವರನ್ನು ಉದಾಹರಿಸುತ್ತಾ ಸ್ತುತಿಸುತ್ತಾರೆ.

ತ್ವದವಗಮೀ ನ ವೇತ್ತಿ ಭವದುತ್ಥ ಶುಭಾಶುಭಯೋಃ
ಗುಣವಿಗುಣಾನ್ವಯಾನ್ ತರ್ಹಿ ದೇಹಭೃತಾಂಚ ಗಿರಃ ।
ಅನುಯುಗಮನ್ವಹಂ ಸಗುಣ ಗೀತಪರಂಪರಯಾ
ಶ್ರವಣಭೃತೋ ಯತಸ್ತ್ವಮಪವರ್ಗಗತಿರ್ಮನುಜೈಃ ॥ ೨೭ ॥

ತ್ವದವಗಮೀ = ಪರಮಾರ್ಥವಿಚಾರ ಪೂರ್ವಕವಾಗಿ ನಿನ್ನನ್ನು ಅಪರೋಕ್ಷ ಕಂಡುಕೊಂಡಿರುವ ತತ್ತ್ವಜ್ಞಾನಿಯು. ಭವದುತ್ಥಶುಭಾಶುಭಯೋಃ = ಧರ್ಮಾಧರ್ಮಗಳಿಗೆ ಅನುಗುಣವಾಗಿ ನಿನ್ನಿಂದ ನೀಡಲ್ಪಟ್ಟ ಪುಣ್ಯಫಲ ಮತ್ತು ಪಾಪಫಲಗಳ, ಗುಣವಿಗುಣಾನ್ವಯಾನ್ = ಸುಖ ದುಃಖ ಸಂಬಂಧವಾಗಿ ಉಂಟಾಗುವ ಹಿತಾಹಿತ ವೇದನೆಗಳನ್ನು. ನ ವೇತ್ತಿ = ವಿಶೇಷ ರೂಪವಾಗಿ ಪರಿಗಣಿಸುವುದಿಲ್ಲ, ಅಂದರೆ ಸುಖವಾಗಲಿ, ದುಃಖವಾಗಲಿ ಒದಗಿದಾಗ ಉಬ್ಬದೇ ಕುಗ್ಗದೇ ಸೈರಣೆಯಿಂದ ಅನುಭವಿಸಿಕೊಂಡಿರುತ್ತಾನೆ. ಸಮಾಧಾನದಿಂದಿರುತ್ತಾನೆ. ಯಥಾಪ್ರಾಪ್ತಾನುವರ್ತಿಯಾಗಿರುತ್ತಾನೆ. ತರ್ಹಿಚ ದೇಹಭೃತಾಂ ಗಿರಃ = ಹಾಗೆಯೇ ಪ್ರಪಂಚದ ಮನುಷ್ಯರ ಪುರಸ್ಕಾರ ತಿರಸ್ಕಾರದ ಮಾತುಗಳನ್ನೂ ನ ವೇತ್ತಿ = ವಿಶೇಷವಾಗಿ ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ (ಮತ್ತು ವಿಧಿ ನಿಷೇಧ ರೂಪ ಶಾಸ್ತ್ರವಚನಗಳನ್ನೂ ಗಣನೆಗೆ ತೆಗೆದುಕೊಳ್ಳುವುದಿಲ್ಲ - ಹೀಗೆ ಹಿಂದೆ ಹೇಳಿದೆ) ಅಂದರೆ - ಯಾವುದರಲ್ಲೂ ಅಭಿಮಾನಪಟ್ಟುಕೊಳ್ಳದೇ ಶಾಂತಿಯಿಂದಿರುತ್ತಾನೆ. ಎಂದಿಷ್ಟು ತತ್ತ್ವಜ್ಞಾನಿಗಳನ್ನು ಉದ್ದೇಶಿಸಿ ಹೇಳಿದುದು. ಹೀಗೆಯೇ ಏಕಾಂತ ಭಕ್ತರೂ ಕೂಡ ಲೋಕಾತೀತರಾಗಿರುತ್ತಾರೆಂಬುದನ್ನು ಹೇಳುತ್ತಾರೆ - ಹೇ ಸಗುಣ = ಅನಂತ ಕಲ್ಯಾಣ ಗುಣಪರಿಪೂರ್ಣ ಪರಮಾತ್ಮ,

ಅನುಯುಗಂ = ಯುಗಗಳಿಗೆ ಅನುಗುಣವಾಗಿ ನೀನು ಸೃಷ್ಟಿ ಮಾಡಿದ, ಅವತಾರ ಮಾಡಿದ, ತತ್ತ್ವೋಪದೇಶ ಮಾಡಿದುದನ್ನು (ಪುರಾಣ ಕಥೆಯನ್ನು) ಮನುಜೈಃ ಗೀತಪರಂಪರಯಾ = ಸಂಪ್ರದಾಯ ಪದ್ಧತಿಯನ್ನನುಸರಿಸಿ ಭಕ್ತ ಜನಗಳಿಂದ ಹಾಡಲ್ಪಡುವ ಸಂಕೀರ್ತನಾ ಭಜನಾ ಮುಂತಾದ ರೀತಿಯಿಂದ, ಅನ್ವಹಂ = ಪ್ರತಿದಿನ ತಪ್ಪದೇ, ಶ್ರವಣ ಭೃತಃ = ಯಾರು ತಮ್ಮ ಕಿವಿಯಲ್ಲಿಯೂ ಮನದಲ್ಲಿಯೂ ನಿನ್ನನ್ನು ತುಂಬಿಸಿಕೊಂಡಿರುವರೋ, ಅಂತಹ ಭಕ್ತರೂ ಕೂಡ ಜನಗಳ ನಿಂದಾಸ್ತುತಿಗಳನ್ನು ಲೆಕ್ಕಿಸುವುದಿಲ್ಲ. ಯತಃ = ಏಕೆಂದರೆ - ಅಪವರ್ಗಗತಿಃ ತ್ವಂ = ಅವರಿಗೆ ಅಮೃತ ಫಲವನ್ನು (ಮುಕ್ತಿಯನ್ನು) ಕೊಡತಕ್ಕವನು ನೀನು. ಲೋಕಜನರಲ್ಲ. ಹೀಗೆ ಏಕಾಂತ ಭಕ್ತರಿಗೂ ತತ್ತ್ವಜ್ಞಾನಿಗಳಿಗೂ ಪರಮಾತ್ಮನಿಂದಲೇ ಪರಮಪುರುಷಾರ್ಥ ಪ್ರಾಪ್ತಿಯಾಗುವುದು. ಹಾಗಿಲ್ಲದ ಕುಯೋಗಿಗಳಾಗಿದ್ದರೆ ಅವರಿಗೆ ಈ ಲೋಕದಲ್ಲಿ ಪರಲೋಕದಲ್ಲಿ ಎರಡೂ ಕಡೆ ಸದ್ಗತಿ ಇಲ್ಲ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಸಮರ್ಥಿಸಲಾಗಿದೆ.

ಈಗ ಕೊನೆಯದಾಗಿ ಸ್ತುತಿಸುವ ಪರಿ ಏನೆಂದರೆ - ಪರಮಾತ್ಮನು ಶ್ರೋತೃ ಜ್ಞಾತೃ ಪ್ರಮಾತೃವಿನ ಪ್ರತ್ಯಗಾತ್ಮನೇ ಆಗಿರುವುದರಿಂದ ಅವನನ್ನು ಅರಿಯಲು ಯಾರಿಂದಲೂ ಸಾಧ್ಯವಿಲ್ಲ. ಅಂದಾಗ ಅವನನ್ನು ಅಜ್ಞೇಯನೆಂದೇ ಅರಿಯಬೇಕು ಮತ್ತು ಅವನು ವಾಣಿಗೂ ಮನಸ್ಸಿಗೂ ವಿಷಯನಾಗದ ಅಪ್ರಮೇಯನಾಗಿರುವನು. ಅವನ ವಿಭೂತಿ ಮಹಿಮೆಗಳು ಅನಂತವಾಗಿರುವುದರಿಂದ ಅವುಗಳ ಪೂರ್ಣ ಜ್ಞಾನವೂ ಸಾಧ್ಯವಾಗುವುದಿಲ್ಲ. ಆದ್ದರಿಂದ ಸತ್ಯಂ ಜ್ಞಾನಂ, ಅಯಮಾತ್ಮಾಬ್ರಹ್ಮ ಇತ್ಯಾದಿ ವಿಧಿರೂಪ ವಾಕ್ಯಗಳ ಉಪದೇಶಕ್ಕಿಂತಲೂ ಅಶಬ್ದಮಸ್ಪರ್ಶಂ, ನೇತಿನೇತ್ಯಾತ್ಮಾ ಇತ್ಯಾದಿ ನಿಷೇಧ ಅಪವಾದ ರೂಪ ವಾಕ್ಯಗಳ ಉಪದೇಶವೇ ಸಮಂಜಸವಾಗುವುದೆಂದು ಸಮರ್ಥಿಸುತ್ತಾ ಸ್ತುತಿಸುತ್ತಾರೆ.

ದ್ಯುಪತಯ ಏವ ತೇ ನ ಯಯುರಂತಮನಂತತಯಾ
ತ್ವಮಪಿ ಯದಂತರಾಂಡನಿಚಯಾ ನನು ಸಾವರಣಾಃ ।
ಖ ಇವ ರಜಾಂಸಿ ವಾಂತಿ ವಯಸಾ ಸಹ ಯಚ್ಛ್ರುತಯಃ

ತ್ವಯಿ ಹಿ ಫಲಂತ್ಯತನ್ನಿರಸನೇನ ಭವನ್ನಿಧನಾಃ ॥ ೨೮॥

ಹೇ ಅನಂತ = ನಿರತಿಶಯಮಹಿಮಾಸ್ವರೂಪ ಪರಮೇಶ್ವರ, ದ್ಯುಪತಯಃ = ಸ್ವರ್ಗಾದಿ ಲೋಕಗಳ ಅಧಿಪತಿಗಳಾದ ಬ್ರಹ್ಮೇಂದ್ರಾದಿ ದೇವತಾಪುರುಷರು, ತೇ ಅಂತಂ = ನಿನ್ನ ಅಂತ್ಯವನ್ನು ಅಂದರೆ ನಿನ್ನ ಸ್ವರೂಪ ಮತ್ತು ಅಗಾಧಶಕ್ತಿ ಮಹಿಮೆಗಳ ಕೊನೆಯನ್ನು ನ ಯಯುಃ ಏವ = ಇಷ್ಟೆ ಎಂದು ಕಂಡಿರುವುದಿಲ್ಲ, ಅರಿತವರಾಗಿಲ್ಲ. ಯಾವಯಾವ ವಸ್ತುವು ಅಂತ್ಯವುಳ್ಳದ್ದೋ ಆ ವಸ್ತುವೊಂದೂ ನೀನಲ್ಲ. ಅದು ನಿನ್ನ ನಿಜಸ್ವರೂಪವಾಗಿರುವುದಿಲ್ಲ. ಅನಂತತಯಾ ತ್ವಂ ಅಪಿ = ಹೀಗೆ ನೀನು ನಿರವಧಿಕನಾಗಿರುವುದರಿಂದ ನೀನೂ ಕೂಡ ನಿನ್ನ ಮಹಿಮೆಯ ಅಂತವನ್ನು ಕಾಣತಕ್ಕವನಾಗಿರುವುದಿಲ್ಲ. ಇದರಿಂದ ನಿನ್ನ ಸರ್ವಜ್ಞತ್ವಕ್ಕಾಗಲಿ, ಸರ್ವಶಕ್ತತ್ವಕ್ಕಾಗಲೀ ಚ್ಯುತಿಯಿಲ್ಲ. ಏಕೆಂದರೆ - ಮೊಲದ ಕೊಂಬನ್ನು ನೋಡದದು, ತಿಳಿಯದದು, ಅದೇನೂ ನ್ಯೂನತೆಯಲ್ಲ. ಇರುವುದನ್ನು ತಿಳಿಯದಿದ್ದರೆ ಆಗ ಕುಂದು ಎಂದು ಭಾವಿಸಬಹುದು. ಇಲ್ಲದುದನ್ನು ತಿಳಿಯದಿರುವುದು ಕಾಣದಿರುವುದು ಕುಂದಲ್ಲ. ನಿನ್ನ ಆನಂತ್ಯದ ಬಗೆ ಏನೆಂದರೆ - ಯದಂತರಾ = ಯಾವ ನಿನ್ನ ಜಠರ ಮಧ್ಯದಲ್ಲಿ, ನನು = ಅಹೋ ಅದ್ಭುತ! ಸಾವರಣಾಃ ಅಂಡನಿಚಯಾಃ = ಸಪ್ತ ಸಪ್ತ ಆವರಣಗಳು ಸುತ್ತುಗಟ್ಟಿರುವ ಅನೇಕ ಬ್ರಹ್ಮಾಂಡಗಳು ಖೇ ರಜಾಂಸಿ ಇವ = ಆಕಾಶದಲ್ಲಿ ಧೂಳಿನ ಕಣಗಳಂತೆ, ವಯಸಾ = ಕಾಲಚಕ್ರದೊಡನೆ, ಸಹ = ಒಟ್ಟಿಗೆ - ಒಂದಾದ ಮೇಲೆ ಒಂದು ಎಂಬಂತಲ್ಲ ಒಟ್ಟೊಟ್ಟಾಗಿ, ವಾಂತಿ = ತಿರುಗುತ್ತಿರುತ್ತವೆ. ಉದ್ಭವಿಸಿ ಭ್ರಮಿಸಿಕೊಂಡಿರುತ್ತವೆ. ಯತ್ ಹಿ = ಯಾವ ಕಾರಣದಿಂದ ಸ್ಥಿತಿ ಗತಿಯು ಹೀಗಿರುವುದೋ, ಆದ್ದರಿಂದಲೇ, ಶ್ರುತಯಃ ಫಲಂತಿ = ವೇದಗಳು ನಿನ್ನನ್ನು ತಾತ್ಪರ್ಯದಿಂದ ಪ್ರತಿಪಾದನೆ ಮಾಡುತ್ತಾ ಸಫಲವಾಗಿವೆ. ಕೃತಾರ್ಥವಾಗಿವೆ, ವೇದಗಳು ಅಭಿಧಾ ಎಂಬ ಮುಖ್ಯಶಬ್ಧ ಶಕ್ತಿಯಿಂದ ತಿಳಿಸಲಾಗದ ಪರಮಾತ್ಮನನ್ನು ಲಕ್ಷಣಾವೃತ್ತಿಯಿಂದ ತಿಳಿಸಿಕೊಡುವುವು. ಸಗುಣಾತ್ಮನು ನಿರವಧಿಕಮಹಿಮೆಯುಳ್ಳವನಾಗಿರುವುದರಿಂದಲೂ ಮತ್ತು ನಿರ್ಗುಣಾತ್ಮನು ಮಾತಿಗೆ ವಿಷಯನಾಗದೇ ಇರುವುದರಿಂದಲೂ, ಈ ಕಾರಣದಿಂದ ತಾತ್ಪರ್ಯದಿಂದ ಪ್ರತಿಪಾದನೆ ಆತ್ಮನನ್ನು ಮಾಡಿಯೂ ಹಾಗೂ ತೃಪ್ತಿಯಿಲ್ಲದೇ ಮತ್ತೆ ಅಶಬ್ಧಂ ಅಸ್ಪರ್ಶಂ, ನೇತಿ ನೇತ್ಯಾತ್ಮಾ ಎಂದು ನಿಷೇಧರೂಪವಾಕ್ಯಗಳಿಂದ ಉಪದೇಶಗಳನ್ನು ಮುಕ್ತಾಯಗೊಳಿಸಿವೆ. ಅದನ್ನೇ

ಹೇಳುತ್ತಾರೆ - ಶ್ರುತಯಃ ಅತನ್ನಿರಸನೇನ ಭವನ್ನಿಧನಾಃ ತ್ವಯಿ ಫಲಂತಿ = ಇದು ಆತ್ಮನಲ್ಲ ಇದು ಆತ್ಮನಲ್ಲ, ಆತ್ಮನು ಇಂತಿರುವುದಿಲ್ಲ, ಹೀಗಿರುವುದು ಆತ್ಮನಲ್ಲ ಎಂದು ಆತ್ಮನಲ್ಲಿ ಇಲ್ಲದ ಅನಾತ್ಮವಸ್ತುಗಳನ್ನು ಸ್ವರೂಪಧರ್ಮಗಳನ್ನು ಅಲ್ಲಗಳೆಯುತ್ತಾ (ಅತದ್‌ವ್ಯಾವೃತ್ತಿ ಎಂಬ ಅಪವಾದಪ್ರಕ್ರಿಯೆಯಿಂದ) ನಿನ್ನಲ್ಲಿಯೇ, (ಶ್ರುತಿಗಳು) ಪರಮಾತ್ಮನಲ್ಲಿಯೇ ಪರ್ಯವಸಾನಗೊಂಡಿರುತ್ತವೆ. ಉಪದೇಶತಾತ್ಪರ್ಯವನ್ನು ತೋರಿಸುತ್ತಾ ಮುಕ್ತಾಯಮಾಡುತ್ತವೆ. ಅಂದರೆ - ಕಾರ್ಯಕಾರಣಭಾವ ಸಂಬಂಧದಿಂದ ಏರ್ಪಟ್ಟುಕೊಂಡಿರುವ ಬ್ರಹ್ಮೇಂದ್ರಾದಿ ಆಧಿದೈವಿಕ ಸೃಷ್ಟಿ , ಅವ್ಯಕ್ತಮಹದಹಂಕಾರಾದಿ ಆಧ್ಯಾತ್ಮಿಕಸೃಷ್ಟಿ , ನಾಮರೂಪಾತ್ಮಕ ಆಕಾಶಾದಿ ಆಧಿಭೌತಿಕಸೃಷ್ಟಿ ಎಂಬ ಭೇದಗಳುಳ್ಳ ವಿಶ್ವವನ್ನು ಕಾರ್ಯರೂಪವಾಗಿ ಕಲ್ಪಿಸಿ-ತೋರಿಸಿ (ಇದು ಅಧ್ಯಾರೋಪ) ಅದರಲ್ಲಿ ತೃಪ್ತಿಯಿಲ್ಲದೇ ಅಂತ್ಯದಲ್ಲಿ ನೇತಿ ನೇತ್ಯಾತ್ಮಾ ಎಂದು ನಿಷೇಧ ಅಂದರೆ ಅಪವಾದ ಮಾಡಿ ಈ ಕ್ರಮದಿಂದ ಪರಮಾತ್ಮನನ್ನು ಉಳಿಸಿಕೊಟ್ಟಿವೆ. ಹಿ = ಇದೇ ನಿರ್ಣಯ - ಸಿದ್ಧಾಂತ.

ಈ ಉಪದೇಶವನ್ನು ಅರಿತುಕೊಂಡು ಮನುಷ್ಯನು ಈ ದೇಹ ನಾನಲ್ಲ, ಈದೇಹ ಆತ್ಮನಲ್ಲ ಎಂದು ದೇಹಾದಿ ಅವ್ಯಕ್ತ ಪರ್ಯಂತ ಅಲ್ಲಗಳೆದುಕೊಂಡು ಅಪವಾದ ಮಾಡಿ ಹೊರತಳ್ಳುತ್ತಾ ಬಂದರೆ ಕೊನೆಯಲ್ಲಿ ಎಲ್ಲವನ್ನೂ ಹೊರತಳ್ಳಿಕೊಂಡ ತಾನು ಆತ್ಮನೇ ಉಳಿದುಕೊಳ್ಳುವನು. ಹೀಗೆ ವೇದವು ಪ್ರತ್ಯಗಾತ್ಮನದಲ್ಲದ ಸ್ವರೂಪವುತ್ತು ತದ್ವಿಷಯಕವಾದ ಜ್ಞಾನಗಳನ್ನು ಅಲ್ಲಗಳೆಯುತ್ತಾ ಕೊನೆಯಲ್ಲಿ ಶುದ್ಧಪರಮಾನಂದ ಅಂತರಾತ್ಮನಲ್ಲೇ ನೆಲೆನಿಲ್ಲುವಂತೆ ಸಹಾಯ ಮಾಡುವುದರಿಂದ ಶ್ರುತಿಯು ಆತ್ಮಪ್ರತಿಪತ್ತಿಗೆ ಪ್ರಮಾಣ ಎನ್ನಲಾಗುವುದು.

ಬ್ರಹ್ಮಾತ್ಮನೇ ಆಗಿದ್ದರೂ ಹಾಗಿರುವುದನ್ನರಿಯದೇ ನಾನು ದೇಹೀ ಎಂದು ಅಭಿಮಾನದಿಂದಿರುವ ಮನುಷ್ಯನು ಅವಿದ್ಯೆ-ಅವಿವೇಕದಿಂದ ನಾನು ಕರ್ತಾ ಭೋಕ್ತಾ ಸಂಸಾರೀ ಎಂದು ನಂಬಿಕೊಂಡು, ಅನಾತ್ಮಸ್ವರೂಪ ಧರ್ಮಗಳನ್ನು ತನ್ನ ಮೇಲೆ ಆರೋಪಮಾಡಿಕೊಂಡು ಭ್ರಾಂತಿಯಿಂದಿರುತ್ತಾನೆ. ಆದರೆ ಹೀಗೆ ಆತ್ಮನಲ್ಲಿ ಆರೋಪ ಮಾಡಿಕೊಂಡ ವಸ್ತುಗಳಿಗೂ ಮತ್ತು ಧರ್ಮಗಳಿಗೂ ವಾಸ್ತವದಲ್ಲಿ ಹುಟ್ಟೂ ಇಲ್ಲ, ನಾಶವೂ ಇಲ್ಲ. ಅವು ಮಾಯಿಕವಾದ್ದರಿಂದಲೇ ನಿಜಾತ್ಮನೊಡನೆ ಅವಕ್ಕೆ

ಸಂಬಂಧವುಂಟಾಗಿರುವುದಿಲ್ಲ. ಅಂದಾಗ ವ್ಯವಹಾರ ಪ್ರಪಂಚವು ಕನಸಿನಂತೆಯೇ ಇದ್ದು ಇರುವುದೆಂದು ಎಂದು ತಿಳಿಯಬೇಕು. ಹೀಗೆ ಶ್ರುತಿ ಪ್ರೋಕ್ತ ಸ್ತುತಿಪಾಠದ ಉಪದೇಶದಿಂದ ಮನುಷ್ಯನಿಗೆ ಮೋಹನಿದ್ರೆಯಿಂದ ಎಚ್ಚರವಾಗಿ ಪ್ರಬೋಧವಾಗುವುದು. ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ಎಂಬ ಅರಿವು - ಸಮ್ಯಗ್ ಜ್ಞಾನವುಂಟಾಗುವುದು. ಆಗಲೇ ತಾನು ಮೊದಲು ತಿಳಿದುಕೊಂಡಿದ್ದೆಲ್ಲಾ ತಪ್ಪು - ಭ್ರಾಂತಿ ಎಂದು ತಿಳಿದು, ವೇದ್ಯ ವೇದಿತೃ ವೇದನಾ ಎಂಬ ತ್ರಿಪುಟೀಭೇದಗಳನ್ನು ಅವನು ಕಳೆದುಕೊಂಡು ಸ್ವಯಮೇವ ಅದ್ವೈತಬ್ರಹ್ಮಸ್ವರೂಪಾನಂದವನ್ನು ಪಡೆಯುವನು ॥ ಓಂ ॥



ಭಾಗವತ ಶ್ರುತಿಗೀತಾಧ್ಯಾಯದ ಕೊನೆಯಲ್ಲಿ ಈವರೆಗೆ ನಿರೂಪಿಸಿದ ವಿಚಾರಸಾರವನ್ನು ಸಂಗ್ರಹಿಸಿ ಈ ರೀತಿ ಭಗವಂತನನ್ನು ಸ್ತುತಿಸಿದ್ದಾರೆ -

ಯೋಽಸ್ಯೋತ್ಪ್ರೇಕ್ಷಕ ಆದಿಮಧ್ಯನಿಧನೇ ಯೋಽವ್ಯಕ್ತಜೀವೇಶ್ವರೋ
ಯಃ ಸೃಷ್ಟ್ವೇದಮನುಪ್ರವಿಶ್ಯ ಋಷಿಣಾ ಚಕ್ರೇ ಪುರಃ ಶಾಸ್ತಿ ತಾಃ ।
ಯಂ ಸಂಪದ್ಯ ಜಹಾತ್ಯಜಾಮನುಶಯೀ ಸುಪ್ತಃ ಕುಲಾಯಂ ಯಥಾ
ತಂ ಕೈವಲ್ಯನಿರಸ್ತಯೋನಿಮಭಯಂ ಧ್ಯಾಯೇದಜಸ್ರಂ ಹರಿಂ ॥

ಯಃ ಅಸ್ಯ ಉತ್ಪ್ರೇಕ್ಷಕಃ = ಯಾವನು ಹೀಗೆ ಈ ಪ್ರಪಂಚವನ್ನು ಸೃಜಿಸುವೆನು ಎಂದು ಆಲೋಚನಾಕ್ರಮದಿಂದ ಸಂಕಲ್ಪಮಾಡಿ ಸೃಷ್ಟಿಸಿರುವನೋ (ಅಂದರೆ ನಿಮಿತ್ತಕಾರಣ) ಸಃ ಶ್ರೀ ಹರಿಃ

ಯಃ ಆದಿ ಮಧ್ಯ ನಿಧನೇ = ಯಾವನು ಸೃಷ್ಟಿಯ ಮೊದಲೂ, ಮಧ್ಯದಲ್ಲೂ ಮತ್ತು ಕೊನೆಯಲ್ಲಿಯೂ ಇದ್ದೇ ಇರುವನೋ, ಅಂದರೆ ಪ್ರಪಂಚಕಾರ್ಯದ ಆದಿಯಲ್ಲಿ ಉಪಾದಾನ ಕಾರಣವಾಗಿದ್ದು, ಮಧ್ಯದ ಸ್ಥಿತಿಕಾಲದಲ್ಲಿ ಇದನ್ನು ಪಾಲನೆ-ರಕ್ಷಣೆ ಮಾಡುತ್ತಿದ್ದು, ಅಂತ್ಯದಲ್ಲಿ ಕಾರ್ಯವು ಅವಸಾನಹೊಂದಿದಾಗ ತನ್ನಲ್ಲೇ ಐಕ್ಯಗೊಳಿಸಿಕೊಂಡು (ಗಡಿಗೆಗೆ ಮಣ್ಣಿನಂತೆ) ತಾನು ಮಾತ್ರ ಇದ್ದೇ ಇರುತ್ತಾನೆಯೋ (ಅಂದರೆ ಉಪಾದಾನಕಾರಣ) - (ಹೀಗೆ ಪ್ರಪಂಚಕಾರ್ಯಕ್ಕೆ ಅಭಿನ್ನನಿಮಿತ್ತೋಪಾದಾನಕಾರಣ)

ಸಃಶ್ರೀಹರಿಃ

ಯಃ ಅವ್ಯಕ್ತಜೀವೇಶ್ವರಃ = ಯಾವನು ಮಾಯೆಗೂ ಮತ್ತು ಜೀವರಿಗೂ ಒಡೆಯನಾಗಿರುವನೋ, ಅಂದರೆ ಚರಾಚರಾತ್ಮಕವಾದ ಪ್ರಪಂಚರೂಪದಿಂದ ಉದ್ಭವಿಸಿಕೊಂಡು ತಾನೇ ತೋರುತ್ತಾ ಈ ಸಮಸ್ತಕ್ಕೂ ಅಧಿಪತಿಯಾಗಿ ಮತ್ತು ಪ್ರೇರಕನಾಗಿರುವನೋ, ಸಃ ಶ್ರೀಹರಿಃ

(ಹೀಗೆ ಬಿಡಿಬಿಡಿಯಾಗಿ ವ್ಯಷ್ಟಿರೂಪದಿಂದಿರುವ ಸಮಸ್ತಪ್ರಾಣಿಗಳ ಜೀವನಕ್ಕನುಕೂಲವಾಗುವಂತೆ)

ಇದಂ ಸೃಷ್ಟ್ವಾ = ಈ ವಿಶ್ವವನ್ನು ಸೃಷ್ಟಿಮಾಡಿ, (ಇದು ನಿರಾತ್ಮಕವಾಗಿದ್ದರೆ, ಅಂದರೆ ಚೈತನ್ಯರಹಿತವಾಗಿದ್ದರೆ ಸ್ಥಿತಿ - ಗತಿಯನ್ನೇ ಪಡೆಯಲಾರದೆಂದು ಆಲೋಚಿಸಿ)

ಯಃ ಋಷಿಣಾ ಸಹ ಅನುಪ್ರವಿಶ್ಯ = ಯಾವನು ಜೀವಸ್ವರೂಪದೊಡನೆ ಈ ನಾಮ ರೂಪಗಳಲ್ಲೆಲ್ಲಾ ತಾನೇ ಪ್ರವೇಶಿಸಿರುವನೋ, ಸಃ ಶ್ರೀಹರಿಃ

ಮತ್ತು, ಪುರಃ ಚಕ್ರೇ = ಸ್ಥೂಲ ಸೂಕ್ಷ್ಮ ಕಾರಣರೂಪದ ಶರೀರಗಳನ್ನು (ಜೀವಸ್ವರೂಪವು ಅವಲ್ಲಿರುತ್ತಾ ಶಬ್ದಾದಿ ವಿಷಯಗಳನ್ನು ಸೇವಿಸುವ ವ್ಯವಹಾರ ಮಾಡಿಕೊಂಡಿರಲು ಅನುಕೂಲವಾಗುವಂತೆ ಶರೀರಾಯತನಗಳನ್ನು) ಸೃಜಿಸಿದ್ದಾನೆಯೋ, ಸಃ ಶ್ರೀಹರಿಃ

ಹಾಗೂ, ಯಃ ತಾಃ ಶಾಸ್ತಿ = ಯಾವನು ಪಟ್ಟಣಗಳಂತಿರುವ ಆ ಮೂರೂ ಆಯತನಗಳನ್ನು ತಾನೇ ಪಾಲಿಸುತ್ತಾ, ಆಳುತ್ತಿದ್ದಾನೆಯೋ, ಅಂದರೆ (ಪ್ರಜೆಗಳಂತಿರುವ) ಜೀವರಿಗೆ ಕರ್ಮ ಫಲ ಭೋಗ - ಅನುಭವವಾಗುವಂತೆ ಪ್ರಭುವಾಗಿ ನೋಡಿಕೊಳ್ಳುತ್ತಾ, ತಾನು ಮಾತ್ರ ಉದಾಸೀನನಾಗಿಯೇ, ವಿಷಯಗಳನ್ನು ಭುಂಜಿಸದೇ ಸಾಕ್ಷಿಮಾತ್ರ ಆಗಿದ್ದುಕೊಂಡಿರುತ್ತಾನೆಯೋ ಅವನು ಪರಮಾತ್ಮನಾಗಿರುತ್ತಾನೆ. ಅವನೇ ಶ್ರೀಹರಿಯು.

ಇಂತಹ ಪರಮಾತ್ಮನನ್ನು ಯಾರು ಅವನ ಮಹಿಮೆಯನ್ನರಿತುಕೊಂಡು

ಭಕ್ತಿಯಿಂದ ಭಜಿಸಿಕೊಂಡಿರುತ್ತಾನೆಯೋ ಮತ್ತು ಅವನ ಸ್ವರೂಪವನ್ನು ತತ್ತ್ವವಿಚಾರ, ವಿವೇಕಜ್ಞಾನ ಮೂಲಕನಾಗಿ ಅಪರೋಕ್ಷ ಮಾಡಿಕೊಂಡಿರುತ್ತಾನೆಯೋ, ಅಂತಹ ಉತ್ತಮಸಾಧಕನು ಮೋಕ್ಷವೆಂಬ ಪರಂಧಾಮವನ್ನು ಪಡೆಯುವನೆಂಬುದನ್ನು ತೋರಿಸುತ್ತಾರೆ -

ಅನುಶಯೀ = ದೇಹಾಭಿಮಾನಿಯಾದ ಮನುಷ್ಯನು, (ದೀರ್ಘದಂಡ ನಮಸ್ಕಾರದೊಡನೆ, ಸರ್ವಭಾವದಿಂದ ಭಜಿಸಿಕೊಂಡಿರುವವನು) ಯಂ ಸಂಪದ್ಯ = ಯಾವನನ್ನು ಏಕಾಪರೋಕ್ಷವಾಗಿ ಕಂಡುಕೊಂಡು ಅವನಲ್ಲೇ ಸೇರಿಕೊಂಡಾಗ, ಆಗಲೇ

ಅಜಾಂ ಜಹಾತಿ = ಸಂಸಾರಕ್ಕೆ ಮೂಲವಾದ ಮಾಯೆಯನ್ನು ಅವಿದ್ಯೆಯನ್ನೂ ಬಿಡುತ್ತಾನೆ. ಕಳೆದುಕೊಳ್ಳುತ್ತಾನೆ. ಆ ಬಂಧನವನ್ನು ಬಿಡಿಸಿಕೊಳ್ಳುತ್ತಾನೆ. ಹೇಗೆಂದರೆ = ದೃಷ್ಟಾಂತ = ಸುಪ್ತಃ ಕುಲಾಯಂ ಯಥಾ = ಮಲಗಿದವನು ನಿದ್ದೆಯಲ್ಲಿ ಶರೀರವನ್ನು ಬಿಟ್ಟಿರುತ್ತಾನೆ. ಹೇಗೋ ಹಾಗೆ. ತನಿನಿದ್ದೆಯಲ್ಲಿರುವಾಗ ದೇಹಸಂಬಂಧವು ಪೂರ್ತಿ ತಪ್ಪಿರುವುದು. ಅವನಿಗೆ ಇದು ದೇಹ, ಇದು ನಾನು ಎಂಬ ಪ್ರಜ್ಞೆ, ಅಭಿಮಾನ ಇರುವುದಿಲ್ಲ. ಆಗ ಕೇವಲ ತಾನು ಆತ್ಮನೇ ಇರುವನು. ನಿದ್ರಿಸುತ್ತಿರವವನನ್ನು ನೋಡುವವರಿಗೆ ಇವನು ಶರೀರೀ ಎಂದು ತೋರುತ್ತಿದ್ದರೂ ನಿದ್ರೆಯಲ್ಲಿರುವವನಿಗೆ ತಾನು ಶರೀರಿ ಎಂಬ ಅನುಭವವು ಇರುವುದಿಲ್ಲ. ಅವನು ಕಟ್ಟುಕಟ್ಟಳೆ ಇಲ್ಲದ ಕೇವಲ ಸುಖದಲ್ಲಿ ಇರುತ್ತಾನೆ. ಆನಂದವಾಗಿರುತ್ತಾನೆ. ಇಂತಹ ಪರಮಪುರುಷಾರ್ಥವನ್ನು ಕರುಣಿಸುವ ದಯಾನಿಧಿಯೇ ಪರಮಾತ್ಮನು.

ಅವನು, ತಾನು, ಕೈವಲ್ಯನಿರಸ್ತಯೋನಿಃ ಅಭಯಃ = ಎಂದೆಂದೂ ಅಸಂಗಾದ್ವೈತ ಭಾವದಿಂದಿರುತ್ತಿದ್ದು ಮಾಯೆಯನ್ನು ತಿರಸ್ಕರಿಸಿರುವನು. ಒದರಿ ದೂರೀಕರಿಸಿರುವನು. ಮತ್ತು ನಿರ್ಭಯನು, ಭಯರಹಿತನು ಹಾಗೂ ಭಯನಿವಾರಕನೂ ಆಗಿರುತ್ತಾನೆ. ಅಂತಹ ಹರಿಂ ಅಜಸ್ರಂ ಧ್ಯಾಯೇತ್ = ಶ್ರೀ ಹರಿ ಎಂಬ ದಿವ್ಯನಾಮವುಳ್ಳ ಪರಮಾತ್ಮನನ್ನು ನಿರಂತರ ಧ್ಯಾನಿಸಬೇಕು. ನೆನೆಯುತ್ತಿರಬೇಕು. ಇತ್ಯೋಂ.

X X X X X

ಶ್ರೀಮದ್ಭಾಗವತ ಮಹಾಪುರಾಣ ೪ನೇ ಸ್ಕಂಧ. ೨೮ನೇ ಅಧ್ಯಾಯ ಶ್ಲೋಕ ೬೨-೬೩. ಪುರಂಜನೋಪಾಖ್ಯಾನ. ಅವಿಜ್ಞಾತಸಖನಾದ ಈಶ್ವರನು ಪುರಂಜನನಿಗೆ

ಉಪದೇಶಿಸಿದ್ದು - ಜೀವೋ ಬ್ರಹ್ಮೈವ ನಾಪರಃ ಎಂಬ ಅದ್ವೈತತತ್ತ್ವಬೋಧೆ -

ಯಥಾ ಪುರುಷ ಆತ್ಮಾನಮೇಕಮಾದರ್ಶಚಕ್ಷುಷೋಃ ।
ದ್ವಿಧಾಭೂತಮವೇಕ್ಷೇತ ತಥೈವಾನ್ತರಮಾವಯೋಃ ॥
ಅಹಂ ಭವಾನ್ ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವ ಭೋಃ ।
ನ ನೌ ಪಶ್ಯನ್ತಿ ಕವಯಶ್ಛಿದ್ರಂ ಜಾತು ಮನಾಗಪಿ ॥

ಮನುಷ್ಯನು ಕನ್ನಡಿಯಲ್ಲಿ ತನ್ನನ್ನೇ ನೋಡಿಕೊಳ್ಳುತ್ತಿರುತ್ತಾನೆ. ಆಗ ಕನ್ನಡಿ ಎಂಬ ಉಪಾಧಿಯಲ್ಲಿ. ತನ್ನ ಪ್ರತಿಬಿಂಬವು ತೋರುವುದು. ಅಲ್ಲಿ ಕಣ್ಣು ಮಧ್ಯವರ್ತಿಯಾದ ಜ್ಞಾನಸಾಧನವಾಗಿರುವುದು. ಇದರಿಂದ ಪ್ರೇಕ್ಷಕ ಪ್ರಮಾತೃ ಪುರುಷನಿಗೆ ತನ್ನ ಏಕರೂಪವೇ ಎರಡು ರೂಪಗಳಾಗಿ ತೋರುವುದು. ಅವುಗಳಲ್ಲಿ ತಾನು ಇರುವುದು, ತನ್ನ ಸ್ವರೂಪವು ಸತ್ಯವಾದುದು = ಬಿಂಬರೂಪವಾಗಿರುತ್ತದೆ. ಉಪಾಧಿಯಾದ ಕನ್ನಡಿಯಲ್ಲಿ ತೋರುವ ತನ್ನ ರೂಪವು ಅಸತ್ಯವಾದುದು = ಪ್ರತಿಬಿಂಬರೂಪವಾಗಿರುತ್ತದೆ. ಅದು ವಾಸ್ತವವಾಗಿರುವುದಲ್ಲ. ಹೀಗೆಂಬ ನಿಜವನ್ನು ಅರಿತುಕೊಂಡರೆ ಸರಿಯಾದ ತಿಳಿವಳಿಕೆಯೇ ಆಗುವುದು. ಹಾಗಲ್ಲದೇ ಮಕ್ಕಳಂತೆ ಬಿಂಬ ಪ್ರತಿಬಿಂಬಗಳೆರಡನ್ನೂ ಸತ್ಯವೆಂದೇ ಬಗೆದುಕೊಂಡರೆ ಅದು ತಪ್ಪಲ್ಲವೇ ? ಹಾಗೆ ಎರಡನ್ನೂ ನಿಜವೆಂದು ನಂಬಿಕೊಂಡರೆ ಅದು ಯಥಾರ್ಥಜ್ಞಾನ ಆಗಲಾರದು. ಆದರೆ ಲೋಕದ ಜನತೆ ತಿಳಿದುಕೊಂಡಿರುವುದೇನೆಂದರೆ - ಪರಮಾತ್ಮಾ ಬೇರೆ ಜೀವಾತ್ಮಾ ಬೇರೆ ಎಂದು ಭಾವಿಸಿಕೊಂಡಿರುತ್ತಾರೆ. ಆದರೆ ಮೇಲೆ ನಿರೂಪಿಸಿರುವಂತೆ ಪರಮಾತ್ಮನು ಬಿಂಬ = ಸತ್ಯವಸ್ತುವು. ಜೀವಾತ್ಮನು ಪ್ರತಿಬಿಂಬ = ಅಸತ್ಯಪದಾರ್ಥವಾಗಿರುವುದು. ಪ್ರತಿಬಿಂಬವು ನಿಜವಸ್ತುವಲ್ಲ. ಮಿಥ್ಯೆ. ಹೀಗೆಂದು ಅಜ್ಞಾತಮಿತ್ರನಾದ ಪರಮಾತ್ಮನು ಬಂದು ಜೀವಾತ್ಮನಾದ ಪುರಂಜನನಿಗೆ ಉಪದೇಶ ಮಾಡಿದ್ದಾನೆ. ತಿಳಿಯಹೇಳಿದ್ದಾನೆ. ಹಾಗೂ ಬಿಂಬ ಪ್ರತಿಬಿಂಬಗಳಿಗಿರುವಂತೆಯೇ ನಮ್ಮಿಬ್ಬರಿಗೂ ಇರುವ ಭೇದವು ಎಂದು ಹೇಳಿದ್ದಾನೆ. ಅಂದಾಗ ಬಿಂಬವು ಸತ್ಯವಸ್ತು ಹೇಗೋ ಹಾಗೆಯೇ ಪರಮಾತ್ಮ ವಸ್ತು ಒಂದೇ ಸತ್ಯವಸ್ತು. ಪ್ರತಿಬಿಂಬವು ಹೇಗೆ ಅಸತ್ಯಪದಾರ್ಥವೋ ಹಾಗೆಯೇ ಜೀವಾತ್ಮ ಎಂಬುದು ಅಸತ್ಯವೇ ಎಂದು ತಿಳಿಯಬೇಕು.

ಇನ್ನು ಎರಡನೆಯ ಶ್ಲೋಕದಲ್ಲಿ ಅರಿಯುವ ಚೇತನ ವಸ್ತುವು ಒಂದೇ ಇರುವುದೆಂಬುದನ್ನು ಸ್ಪಷ್ಟವಾಗಿ ತಿಳಿಸಿಕೊಡುವನು. ಅಯ್ಯಾ, ನಾನು ನೀನೇ. ನೀನು ಬೇರೆ ಅಲ್ಲ. ನೀನೇ ನಾನು. ನಾನು ಬೇರೆ ಅಲ್ಲ. ನಾನು ನೀನು ಬೇರೆ ಬೇರೆ ಅಲ್ಲ. ಹೀಗೆಂಬುದನ್ನು ಅರಿತುಕೋ. ತತ್ತ್ವಜ್ಞಾನಿಗಳಾದ ಮಹಾತ್ಮರು ನಮ್ಮಿಬ್ಬರಲ್ಲಿ = ಜೀವ - ಈಶ್ವರರಲ್ಲಿ ಸ್ವಲ್ಪವಾಗಲೀ ಛಿದ್ರ-ಸಂದು ತಾರತಮ್ಯ ಭೇದವನ್ನೂ ಎಣಿಸುವುದಿಲ್ಲ. ಬಗೆಯುವುದಿಲ್ಲ. ಕಾಣುವುದಿಲ್ಲ. ಎಂದು ತಿಳಿಯ ಹೇಳಿದ್ದಾನೆ. ಹೀಗೆ ಆತ್ಮೈಕ್ಯವೇ ಉಪದೇಶಿಸಲ್ಪಟ್ಟಿದೆ. ಅಂದಾಗ ಅದ್ವೈತವೇ ಪರಮಾರ್ಥವು. ಇದೇ ತತ್ತ್ವಜ್ಞಾನವು ಎಂದು ಸಿದ್ಧಾನ್ತವಾಗಿದೆ.

ಜ್ಞಾನಿಗಳು ತಮ್ಮ ನಿಜ ಸ್ವರೂಪವನ್ನು ದೇಹೇಂದ್ರಿಯಾದಿಗಳಿಂದ ಪೃಥಕ್ಕರಿಸಿಕೊಂಡು, ಯಾವಾಗಲೂ ಸುಷುಪ್ತಿ ಸ್ಥಾನದ ಅನುಭವದಂತೆ ಅದ್ವೈತ ನಿಷ್ಠೆಯಲ್ಲೇ ಇರುತ್ತಾರೆ. ಇದೇ ವಿವಿಕ್ತಾನುಭವವು. ಸಮ್ಯಗ್ ಜ್ಞಾನವು.

★ ★ ★ ★ ★

ಉದರಮನ್ತರಂ ಕುರುತೇ । ಅಥ ತಸ್ಯ ಭಯಂ ಭವತಿ ॥ ತೈ. ಉ.

ಬುದ್ಧೀಂದ್ರಿಯಮನಃ ಪ್ರಾಣಾನ್ ಜನಾನಾಮಸೃಜತ್ ಪ್ರಭುಃ ।
ಮಾತ್ರಾರ್ಥಂ ಚ ಭವಾರ್ಥಂ ಚ ಆತ್ಮನೇಽಕಲ್ಪನಾಯ ಚ ॥

ಭಾಗವತ ೧೦ - ೮೭

ಪ್ರಭುಃ = ಮಾಯೋಪಾಧಿವಿಶಿಷ್ಟನಂತೆ ಕಂಡರೂ ಉಪಾಧಿವಶನಾಗದೇ ಅಸಂಗನೂ ಸರ್ವಸ್ವತಂತ್ರನೂ, ಸರ್ವಜ್ಞನೂ, ಸರ್ವಶಕ್ತನೂ, ಸರ್ವೇಶ್ವರನೂ ಆಗಿರುವ ಪರಮಾತ್ಮನು. ಜನಾನಾಂ = ನರಮನುಷ್ಯರಿಗೆ. ಬುದ್ಧೀಂದ್ರಿಯಮನಃ ಪ್ರಾಣಾನ್ = ಬುದ್ಧಿ, ಇಂದ್ರಿಯ, ಮನಸ್ಸು ಮತ್ತು ಪ್ರಾಣ ಇವುಗಳನ್ನು (ಲಿಂಗಶರೀರ = ಸೂಕ್ಷ್ಮದೇಹ) ಸೃಷ್ಟಿಮಾಡಿಕೊಟ್ಟಿದ್ದಾನೆ. ಇವನ್ನು ಸೃಷ್ಟಿಮಾಡಿಕೊಟ್ಟಿರುವುದರ ಉದ್ದೇಶ ಮತ್ತು ಪ್ರಯೋಜನ ಏನೆಂದರೆ - ೧. ಮಾತ್ರಾರ್ಥಂಚ = ಮೀಯಂತೇ ಇತಿ ಮಾತ್ರಾಃ ಶಬ್ದಾದಯಃ = ತದರ್ಥಂ, ಅಂದರೆ ವಿಷಯಗಳ ಸಂಗ್ರಹ-ಪ್ರಾಪ್ತಿಗಾಗಿ, ಅಂದಾಗ ಇದರಿಂದ ಅರ್ಥವೆಂಬ ಪುರುಷಾರ್ಥಕ್ಕೋಸ್ಕರ ಎಂದಾಯಿತು. ೨. ಭವಾರ್ಥಂಚ = ಭವೋ ವ್ಯವಹಾರಃ. (ಧರ್ಮ) ವ್ಯವಹಾರ ನಡೆಸಿಕೊಂಡಿರಲು ಎಂದರ್ಥ. ಇದರಿಂದ ಧರ್ಮವೆಂಬ ಪುರುಷಾರ್ಥಕ್ಕೋಸ್ಕರ ಎಂದಾಯಿತು. ೩. ಆತ್ಮನೇ = ಅವಸ್ಥಾನ್ತರಗಾಮಿನೇ, ಲೋಕಾನ್ತರಗಾಮಿನೇ, ಆತ್ಮನಃ ತತ್ತದವಸ್ಥಾಲೋಕೇಷು ಭೋಗಸಿದ್ಧಯೇ ಇತ್ಯರ್ಥಃ = ಅಂದರೆ ಆತ್ಮನು ಜಾಗರಾದ್ಯವಸ್ಥೆಗಳಲ್ಲೂ, ಇಹಲೋಕ ಪರಲೋಕಗಳಲ್ಲೂ ಸುಖಾದಿ ವಿಷಯಗಳ ಭೋಗ-ಅನುಭವ ಹೊಂದಲು ಎಂದರ್ಥ. ಇದರಿಂದ ಕಾಮ ಎಂಬ ಪುರುಷಾರ್ಥಕ್ಕೋಸ್ಕರ ಎಂದಾಯಿತು. ಈಗ ಕೊನೆಯದಾಗಿ ೪. ಅಕಲ್ಪನಾಯ ಚ = ಕಲ್ಪನಾನಿವೃತ್ತಯೇ = ಮುಕ್ತಯೇ ಇತ್ಯರ್ಥಃ = ನೈಸರ್ಗಿಕವಾದ ಕಲ್ಪನೆಗಳನ್ನೂ ವಿಕಲ್ಪಗಳನ್ನೂ ಕಳೆದುಕೊಳ್ಳುವುದಕ್ಕೋಸ್ಕರ. ಅಂದರೆ ಮನುಷ್ಯನು ಅವಿದ್ಯೆಯಿಂದ ನೈಸರ್ಗಿಕವಾಗಿ ತನ್ನಲ್ಲಿ ಕಲ್ಪಿಸಿಕೊಂಡಿರುವ ಕರ್ತೃತ್ವ ಭೋಕ್ತೃತ್ವ ಪ್ರಮಾತೃತ್ವ ಸುಖೀ ದುಃಖೀ ಸಂಸಾರೀ ಇತ್ಯಾದಿ ಮಿಥ್ಯಾಕಲ್ಪನೆಗಳನ್ನು ನೀಗಿಕೊಂಡು ಸ್ವರೂಪಸ್ಥನಾಗಲು = ನಿತ್ಯಾನಂದಪೂರ್ಣನಾಗಲು ಎಂದರ್ಥ. ಇದರಿಂದ ಮೋಕ್ಷವೆಂಬ ಪರಮಪುರುಷಾರ್ಥಕ್ಕೋಸ್ಕರ ಎಂದಾಯಿತು. ಈ ರೀತಿ ಚತುರ್ವಿಧ ಪುರುಷಾರ್ಥ ಪ್ರಯೋಜನ-ಉಪಯೋಗ ಆಗಲೆಂದು ದಯಾಮಯನಾದ ಈಶ್ವರನು ಅಮುಕ್ತರಾದ

ಅಜ್ಞಾನಿಗಳಾದ ಜೀವರ ಮೇಲೆ ಕರುಣೆಯಿಂದ ಸೂಕ್ಷ್ಮ ಶರೀರವನ್ನು ಸೃಷ್ಟಿಮಾಡಿರುವನು. ಅಂದಾಗ ಅದರಲ್ಲಿ ಸ್ವಾರ್ಥವೇನೂ ಇಲ್ಲ. ಈ ರೀತಿ ಶಾಸ್ತ್ರವು ಈಶ್ವರನನ್ನು ಸೃಷ್ಟಿಕರ್ತಾ, ಸಗುಣ ಎಂದು ಹೇಳಿದ್ದರೂ ವಸ್ತುಸ್ವಭಾವದಿಂದ ಅಸಂಗನೇ ಆಗಿರುವುದರಿಂದ ಆತ್ಮನು ನಿತ್ಯಮುಕ್ತನೇ. ಸರ್ವಸ್ವತಂತ್ರನೇ, ಸರ್ವೇಶ್ವರನೇ ಆಗಿರುತ್ತಾನೆ.

ಸ ಈಶ್ವರೋ ವ್ಯಷ್ಟಿಸಮಷ್ಟಿರೂಪೋ ವ್ಯಕ್ತಸ್ವರೂಪೋಽಪ್ರಕಟಸ್ವರೂಪಃ ।
ಸರ್ವೇಶ್ವರಸ್ಸರ್ವದೃಕ್ ಸರ್ವವಿಚ್ಚ ಸಮಸ್ತಶಕ್ತಿಃ ಪರಮೇಶ್ವರಾಖ್ಯಃ ॥

ವಿ.ಪು. ೬-೫-೮೯

ಸತ್ಯಂ ಜ್ಞಾನಮನಂತಂ ಬ್ರಹ್ಮವಿಶುದ್ಧಂ ಪರಂ ಸ್ವತಸ್ಸಿದ್ಧಮ್ ।
ನಿತ್ಯಾನಂದೈಕರಸಂ ಪ್ರತ್ಯಗಭಿನ್ನಂ ನಿರಂತರಂ ಜಯತಿ ॥

- ವಿವೇಕ ಚೂಡಾಮಣಿ

ಓಂ ಸ್ವಸ್ತಿ - ಶುಭಂ - ಮಂಗಲಮ್

ಕೆ. ನಾ. ವೆಂಕಟೇಶ ಶಾಸ್ತ್ರಿ
9-2-03
ಬೆಂಗಳೂರು.

ಸಕಲ ಜಗತ್ತನ್ನೂ ತನ್ನ ಸರ್ವಶಕ್ತಿಗಳೊಡನೆ ತನ್ನಲ್ಲೇ ಅಡಗಿಸಿಕೊಂಡು ಯೋಗನಿದ್ರಾಮುದ್ರೆಯಲ್ಲಿರುತ್ತಿರುವಾಗ ಆ ಪ್ರಲಯಕಾಲದ ಅಂತ್ಯದಲ್ಲಿ, ಅಂದರೆ ಪುನಃ ಸೃಷ್ಟಿಸಮಯ ಪ್ರಾಪ್ತವಾದಾಗ ಹೊಗಳುಭಟರಂತಿರುವ ವೇದಗಳು ಅವನ ಗುಣಗಾನ ಮಾಡುತ್ತವೆ. ಹೇಗೆಂದರೆ, ಪರಮಾತ್ಮನಿಗೆ ಮಾತ್ರವೇ ಸಂಬಂಧಿಸಿಕೊಂಡಿರುವ ಅವನ ಮಹಾಗುಣ, ಮಹಿಮೆ, ಕೀರ್ತಿಗಳನ್ನು ಉಲ್ಲೇಖಿಸುತ್ತಾ ಸ್ತುತಿಸುತ್ತವೆ. ಹೀಗೆ ಪ್ರಶಂಸಾಗಾನದಿಂದ ಪರಮಾತ್ಮನನ್ನು ಯೋಗ ನಿದ್ರೆಯಿಂದ ಎಬ್ಬಿಸುತ್ತವೆ. ಆತ್ಮನು ಒಬ್ಬನೇ ಅದ್ವಿತೀಯನಾಗಿರುವುದರಿಂದ ಪರಮಾತ್ಮನು ಎಚ್ಚರಗೊಳ್ಳುವಂತೆ, ಆ ಸ್ತುತಿಪಾಠಗಳನ್ನು ಆಲಿಸಿ ಅರ್ಥಮಾಡಿಕೊಳ್ಳುವ ಜೀವಾತ್ಮರು ತಮ್ಮ ಅವಿದ್ಯಾಽಜ್ಞಾನಮೋಹ ನಿದ್ರೆಯನ್ನು ಕಳೆದುಕೊಂಡು ಎಚ್ಚೆತ್ತುಕೊಳ್ಳುವರು. ಏಕೆಂದರೆ ಶ್ರುತಿಗೀತೆಯು ಅದ್ವಿತೀಯಾತ್ಮನ ಯಥಾರ್ಥ ಗುಣಗಾನವಾಗಿರುವುದರಿಂದ ಮೋಹನಿದ್ರಾಮಗ್ನರಾದ ಜೀವಾತ್ಮರಿಗೆ ಗುರುಋಷಿ ರೂಪವಾದ ವೇದವು ಉಪದೇಶ-ಪಾಠ ಪ್ರವಚನವನ್ನೇ ಮಾಡುತ್ತದೆ. ಇದರಿಂದ ಜೀವರಿಗೆ ತಮ್ಮ ನಿಜ ಸ್ವರೂಪವು ಗೊತ್ತಾಗುತ್ತದೆ. ಹೀಗೆ ಶ್ರುತಿಗಳು ಮಾಡಿರುವ ಪರಮಾತ್ಮ ಸ್ವರೂಪ ಪ್ರತಿಪಾದನೆಯ ಸಾರ್ಥಕವಾಗಿರುತ್ತದೆ, ಸಮನ್ವಿತವಾಗಿರುತ್ತದೆ. ಅಂದರೆ ಪರಮಾತ್ಮನನ್ನು ಸ್ತುತಿಸುವ ಶ್ರುತಿಗಳು ಜೀವಾತ್ಮರನ್ನು ಎಚ್ಚರಗೊಳಿಸುತ್ತವೆ ಎಂದು ತಾತ್ಪರ್ಯ.

ಶ್ರುತಿಗೀತೆ - ಶ್ರುತಯ ಊಚುಃ - ಶ್ಲೋಕ - ೧

ಪರಮಾತ್ಮನನ್ನು ಶ್ರುತಿಗಳು ಸ್ತುತಿಸುತ್ತವೆ.

ಜಯಜಯ ಜಹ್ಯಜಾಮಜಿತ ದೋಷಗೃಭೀತಗುಣಾಂ
ತ್ವಮಸಿ ಯದಾತ್ಮನಾ ಸಮವರುದ್ಧಸಮಸ್ತಭಗಃ ।
ಅಗಜಗದೋಕಸಾಮಖಿಲ ಶಕ್ತ್ಯವಬೋಧಕ ತೇ
ಕ್ವಚಿದಜಯಾಽಽತ್ಮನಾ ಚ ಚರತೋಽನುಚರೇನ್ನಿಗಮಃ ॥ ೧ ॥

ಪರಮಾತ್ಮನು ಮನೋವಾಣಿಗಳಿಗೆ ಅಗೋಚರ - ಅಪ್ರಮೇಯನಾಗಿದ್ದರೂ ಋಷಿ ಸ್ವರೂಪದ ಶ್ರುತಿಗಳು ಭಾಗತ್ಯಾಗಲಕ್ಷಣಾ ಎಂಬ ಉಪಾಯದಿಂದ ಅಥವಾ ಅನಾತ್ಮಸ್ವರೂಪವ್ಯಾವೃತ್ತಿ, ಅಂದರೆ ಅವನವಲ್ಲದ ಸ್ವರೂಪ ಧರ್ಮಗಳನ್ನು

ईश्वरस्य परोभावः क इति चेत् -

कारणागोचरत्वमेव - तदुक्तं अव्यक्तमूर्तिः इ

---

पञ्चदशी ६ श्लोकाः

आत्माभासस्य जीवस्य संसारो नात्मवस्तुनः ।
इति बोधो भवेद्विद्या लभ्यतेऽसौ विचारणात् ॥ ११ ॥

सदा विचारयेत् तस्माज्जगज्जीवपरात्मनः ।
जीवभावजगद्भावबाधे स्वात्मैव शिष्यते ॥ १२ ॥

नाप्रतीतिस्तयोर्बाधः किंतु मिथ्यात्वनिश्चयः ।
नो चेत् सुषुप्तिमूर्च्छादौ मुच्येतायत्नतो जनः ॥ १३ ॥

परमात्मावशेषोऽपि तत्सत्यत्वविनिश्चयः ।
न जगद्विस्मृतिर्नो चेज्जीवन्मुक्तिर्न सम्भवेत् ॥ १४ ॥

ಸುಖಕ್ಕೆ ವಿಷಯಗಳೇ ಕಾರಣ ಎಂದು ಭಾವಿಸಿದರೆ ಆಗ
ವಿಷಯವೊಂದೂ ಇಲ್ಲದ ನಿದ್ರೆಯಲ್ಲಿ ಸುಖಾನುಭವವೇ
ಇರುವುದಿಲ್ಲೆಂದಾಗುವುದು. ನಿದ್ರೆಯು ದುಃಖಮಯ ಎಂದಾಗುವುದು.
ಇದು ಅನುಭವಕ್ಕೆ ಒಪ್ಪಿತವಾಗಿಲ್ಲ.

ಮನಸ್ಸು ಚಿಂತಾಗ್ರಸ್ತವಾಗಿದ್ದರೆ ವಿಷಯಗಳು ಇದ್ದರೂ ಸುಖವಾಗುವುದಿಲ್ಲ.
ಇದೇ ಅನುಭವ. ಆದ್ದರಿಂದ ವಿಷಯಗಳಲ್ಲಿ ಸುಖವಿಲ್ಲ. ಇದೇ ನಿರ್ಣಯ.

---

संसारः परमार्थोऽयं सल्लग्नः स्वात्मवस्तुनि ।
इति भ्रान्तिरविद्या स्याद्विद्ययैषा निवर्तते ॥१०-६॥

Problem analysis & solving

Decision-making

To be more effective

Personal counseling

Emotional counseling

Positive attitude building

***Coaching for competitive exams.***

## SEMESTER VII & VIII

Resume building

GD & mock sessions

Interview skills

Interview related personality development